ಕಾಯಕವೇ ಕೈಲಾಸ



# ಸಿದ್ಧಗಂಗಾ



ಸ್ವಾತಂತ್ರ್ಯದ ಅಮೃತ ಮಹೋತ್ಸವ
ಹಾರ್ದಿಕ ಶುಭಾಶಯಗಳು

ಸಂಪುಟ : ೫೮ ಆಗಸ್ಟ್ ೨೦೨೨ ಸಂಚಿಕೆ : ೦೮



ಜುಲೈ ೩ ರಂದು ಶ್ರೀ ಕಂಚುಗಲ್ ಬಂಡೇಮಠದಲ್ಲಿ ಏರ್ಪಡಿಸಿದ್ದ ಶ್ರೀ ಶ್ರೀ ಶಿವರುದ್ರ ಮಹಾಸ್ವಾಮಿಗಳವರ ಸಂಸ್ಮರಣೆ ಹಾಗೂ ಪೂಜ್ಯ ಶ್ರೀ ಶ್ರೀ ಬಸವಲಿಂಗ ಸ್ವಾಮಿಗಳವರ ಪಟ್ಟಾಧಿಕಾರ ರಜತ ಮಹೋತ್ಸವ ಸಮಾರಂಭವನ್ನು ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ಹಾಗೂ ಶ್ರೀ ಸುತ್ತೂರು ಜಗದ್ಗುರು ಪರಮಪೂಜ್ಯ ಶ್ರೀ ಶ್ರೀ ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳವರ ದಿವ್ಯಸಾನ್ನಿಧ್ಯದಲ್ಲಿ ಜ್ಯೋತಿ ಬೆಳಗಿಸಿ ಉದ್ಘಾಟಿಸಲಾಯಿತು. ಈ ಸಂದರ್ಭದಲ್ಲಿ ಪೂಜ್ಯ ಶ್ರೀ ಶ್ರೀ ಬಸವಲಿಂಗ ಸ್ವಾಮಿಗಳು, ಬೇಲಿಮಠದ ಶ್ರೀಗಳು, ಕೆಪಿಸಿಸಿ ಪ್ರಚಾರ ಸಮಿತಿ ಅಧ್ಯಕ್ಷ ಶ್ರೀ ಎಂ.ಬಿ. ಪಾಟೀಲ, ಚಿತ್ರನಟ ಶ್ರೀ ದೊಡ್ಡಣ್ಣ, ವೀರಶೈವ ಲಿಂಗಾಯತ ಅಭಿವೃದ್ಧಿ ನಿಗಮದ ಅಧ್ಯಕ್ಷರಾದ ಶ್ರೀ ಬಿ.ಎಸ್. ಪರಮಶಿವಯ್ಯ, ಬಿಬಿಎಂಪಿ ಮಾಜಿ ಉಪ ಮಹಾಪೌರರಾದ ಶ್ರೀ ಬಿ.ಎಸ್. ಪುಟ್ಟರಾಜು ಮೊದಲಾದ ಗಣ್ಯರು ಉಪಸ್ಥಿತರಿದ್ದರು.



ಕರ್ನಾಟಕದ ಘನತೆವೆತ್ತ ರಾಜ್ಯಪಾಲರಾದ ಶ್ರೀ ಥಾವರ್ ಚಂದ್ ಗೆಹ್ಲೋಟ್ ಅವರು ಶ್ರೀಮಠಕ್ಕೆ ಭೇಟಿ ನೀಡಿ ಪರಮಪೂಜ್ಯ ಶ್ರೀ ಶ್ರೀ ಶಿವಕುಮಾರ ಶಿವಯೋಗಿಗಳವರ ಗದ್ದುಗೆ ದರ್ಶನ ಮಾಡಿ, ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರಿಂದ ಆಶೀರ್ವಾದ ಪಡೆದರು.



ಬೆಂಗಳೂರಿನಲ್ಲಿ ಕರ್ನಾಟಕ ರಾಜ್ಯ ಸರ್ಕಾರಿ ನಿವೃತ್ತ ನೌಕರರ ಸಂಘದವರು ಏರ್ಪಡಿಸಿದ್ದ ಸುವರ್ಣ ಮಹೋತ್ಸವ ಸಮಾರಂಭವನ್ನು ಪರಮಪೂಜ್ಯ ಶ್ರೀ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ಹಾಗೂ ಪರಮಪೂಜ್ಯ ಶ್ರೀ ಸೌಮ್ಯನಾಥ ಸ್ವಾಮಿಗಳವರ ದಿವ್ಯಸಾನ್ನಿಧ್ಯದಲ್ಲಿ ಉದ್ಘಾಟಿಸಲಾಯಿತು. ಈ ಸಂದರ್ಭದಲ್ಲಿ ಮುಖ್ಯಮಂತ್ರಿ ಶ್ರೀ ಬಸವರಾಜ ಬೊಮ್ಮಾಯಿ, ವಸತಿ ಸಚಿವ ಶ್ರೀ ವಿ. ಸೋಮಣ್ಣ ಮೊದಲಾದ ಗಣ್ಯರು ಉಪಸ್ಥಿತರಿದ್ದರು.




## ಅಂತರಂಗ



॥ ಓಂ ಶ್ರೀ ಗುರುಬಸವಲಿಂಗಾಯ ನಮಃ ॥
ಆವಾವ ಕಾಯಕವ ಮಾಡಿದರು ಬಸವೇಶ
ಆವಗಂ ಶರಣರನು ಸೇವಿಪೆನು ಬಸವೇಶ



# ಸಿದ್ಧಗಂಗಾ


ಸಂಪುಟ : ೫೮ ಆಗಸ್ಟ್ ೨೦೨೨ ಸಂಚಿಕೆ : ೦೮

ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು
ಸಂಸ್ಥಾಪಕ ಅಧ್ಯಕ್ಷರು
ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳು
ಅಧ್ಯಕ್ಷರು
ಪ್ರಧಾನ ಸಂಪಾದಕರು :
ಹೆಚ್.ವಿ. ವೀರಭದ್ರಯ್ಯ
ಸಂಪಾದಕರು :
ಎಚ್.ಎಸ್. ಸಿದ್ಧಗಂಗಪ್ಪ
ಪ್ರಕಾಶಕರು :
ಕೆ.ಬಿ. ಶಿವಶಂಕರಯ್ಯ
ಪತ್ರಿಕಾ ನಿರ್ವಹಣಾ ಸಮಿತಿ :
ಎಂ. ರೇಣುಕಾರಾಧ್ಯ
ವಿ. ಸೋಮಶೇಖರಯ್ಯ
ಎನ್.ವಿ. ಸತೀಶ್‌ಕುಮಾರ್
ಪ್ರಕಾಶನ :
ಹಳೆಯ ವಿದ್ಯಾರ್ಥಿಗಳ ಸಂಘ
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ-೫೭೨ ೧೦೪.
ಮುದ್ರಕರು :
ಗೀತಾಂಜಲಿ ಗ್ರಾಫಿಕ್ಸ್
ಬಿ-೭೧, ಕೆ.ಎಸ್.ಎಸ್.ಐ.ಡಿ.ಸಿ. ಕೈಗಾರಿಕನಗರ
ರಾಜಾಜಿನಗರ, ಬೆಂಗಳೂರು-೫೬೦ ೦೧೦



ವಿಳಾಸ :
"ಸಂಪಾದಕರು"
'ಸಿದ್ಧಗಂಗಾ' ಮಾಸಪತ್ರಿಕೆ, ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ-572 104
ದೂ: 0816-2282322.
ಮೊ : 91410 36345


## ಒಳಪುಟಗಳಲ್ಲಿ ..................




| ಚಂದಾ ವಿವರ | ಆಜೀವ ಸದಸ್ಯತ್ವ ರೂ. 1500/-<br>ವಾರ್ಷಿಕ ಚಂದಾ ರೂ. 250.00 ಬಿಡಿ ಪ್ರತಿ ರೂ. 20.00 |
|---|---|


email: siddaganganews@gmail.com



## ಪ್ರಧಾನ ಸಂಪಾದಕರ ನುಡಿ........

ನಾವೀಗ ಸ್ವಾತಂತ್ರ್ಯದ ಅಮೃತ ಮಹೋತ್ಸವ ಆಚರಣೆಯ ಸಂಭ್ರಮದಲ್ಲಿದ್ದೇವೆ. ಬ್ರಿಟಿಷರ್ ಕಪಿಮುಷ್ಠಿಯಿಂದ ಭಾರತಾಂಬೆಯನ್ನು ಬಿಡುಗಡೆಗೊಳಿಸಲು ಸಾವಿರಾರು ದೇಶಪ್ರೇಮಿಗಳ ತ್ಯಾಗ, ಬಲಿದಾನವನ್ನು ಕೃತಜ್ಞತೆಯಿಂದ ಸ್ಮರಿಸುವುದು ನಮ್ಮ ಆದ್ಯ ಕರ್ತವ್ಯವಾಗಿದೆ. ಅವರು ಕಷ್ಟಪಟ್ಟು ತಂದುಕೊಟ್ಟ ಸ್ವಾತಂತ್ರ್ಯದಿಂದ ನಾವಿಂದು; ನೆಮ್ಮದಿಯಿಂದ ಜೀವನ ನಡೆಸುವಂತಾಗಿದೆ. ನಮಗೆ ದೊರೆತಿರುವ ಸ್ವಾತಂತ್ರ್ಯವನ್ನು ಸದುಪಯೋಗಪಡಿಸಿಕೊಳ್ಳುವ ಗುರುತರವಾದ ಜವಾಬ್ದಾರಿ ನಮ್ಮ ಮೇಲಿದೆ. ಆದರೆ ಇಂದು ಆಗುತ್ತಿರುವುದೇನು! ಆತ್ಮಾವಲೋಕನ ಮಾಡಿಕೊಳ್ಳಬೇಕಾಗಿದೆ.

ಅಭಿವ್ಯಕ್ತಿ ಸ್ವಾತಂತ್ರ್ಯ ವಿವಿಧ ರೀತಿಗಳಲ್ಲಿ ದುರುಪಯೋಗವಾಗುತ್ತಿರುವುದನ್ನು ಗಮನಿಸುತ್ತಿದ್ದೇವೆ. ಮಾತಿನ ಶಕ್ತಿ ಇರುವ ವ್ಯಕ್ತಿ ಇರುವವರೆಗೂ ಅಭಿವ್ಯಕ್ತಿ ಎನ್ನುವುದು ಇರುವಂತಹದೇ. ಈ ಅಭಿವ್ಯಕ್ತಿಗೆ ಸ್ವಾತಂತ್ರ್ಯ ಇರಬೇಕು ಎನ್ನುವುದು ಸಹಜವೆ. ಆದರೆ ಈ ಅಭಿವ್ಯಕ್ತಿ ಹೇಗಿರಬೇಕು, ಹಾಗೆಯೇ ಈ ಸ್ವಾತಂತ್ರ್ಯ ಎಷ್ಟಿರಬೇಕು, ಯಾವ ರೀತಿಯಲ್ಲಿರಬೇಕು ಎಂಬುದನ್ನು ಆತ್ಮವಿಮರ್ಶೆ ಮಾಡಿಕೊಳ್ಳಲು ಸಕಾಲವಾಗಿದೆ. ಅಭಿವ್ಯಕ್ತಿ ಸ್ವಾತಂತ್ರ್ಯ ಎಂಬ ಮಾತು ಮುನ್ನಲೆಗೆ ಬಂದುದೇ ೧೨ನೇ ಶತಮಾನದ ಅನುಭವ ಮಂಟಪದಲ್ಲಿ. ಅಲ್ಲಿ ನಡೆಯುತ್ತಿದ್ದ ಚರ್ಚೆಗಳು; ಅರಿವಿನ ದಿಗಂತವನ್ನು ವಿಸ್ತರಿಸುವಂತಿದ್ದವು. ಅಲ್ಲಿ ನಡೆಯುತ್ತಿದ್ದ ಚಿಂತನ ಮಂಥನಗಳಲ್ಲಿ ಈರ್ಷೆ ಇರಲಿಲ್ಲ, ಕುತಂತ್ರವಿರಲಿಲ್ಲ. ಬೇರೊಬ್ಬರ ಮನಸ್ಸನ್ನು ನೋಯಿಸುವ, ಬೇರೊಬ್ಬರ ಭಾವನೆಗಳ ಮೇಲೆ ಗದಾಪ್ರಹಾರ ಮಾಡುವಂತಿರಲಿಲ್ಲ. ಅವರ ಮಾತುಗಳನ್ನು ಕೇಳುವಾಗ ಹುಣ್ಣಿಮೆಯಲ್ಲಿ ತಂಗಾಳಿ ಬೀಸುವ ಅನುಭವವಾಗುತ್ತಿತ್ತು.

ವ್ಯಕ್ತಿಗೆ ಇಂದು ಸಾಮಾಜಿಕ ನಿಯಮಗಳನ್ನು ಅನುಸರಿಸುವುದು ಅಗತ್ಯ. ಆದರೆ ಇಂದು ಬಹುತೇಕ ವ್ಯಕ್ತಿಗಳು ಇದನ್ನು ಅರ್ಥ ಮಾಡಿಕೊಳ್ಳುವಲ್ಲಿ ಸೋತಿರುವುದು ಕಂಡುಬರುತ್ತದೆ. ವ್ಯಕ್ತಿಗೆ ಒಂದು ಸಾಮಾಜಿಕ ಪ್ರಜ್ಞೆ ಇರಬೇಕು. ಆದರೆ, ವಾಸ್ತವವಾಗಿ ಅಂತಹ ಪ್ರಜ್ಞಾವಂತನಿಗೆ ಯಾವುದೇ ಕಾನೂನು ಅಥವಾ ಸಂವಿಧಾನದ ಅಗತ್ಯವಿರುವುದಿಲ್ಲ. ಏಕೆಂದರೆ ಅವನು ಬೇರೆಯವರಿಗೆ ನೋವಾಗದಂತೆ ಎಚ್ಚರ ವಹಿಸುತ್ತಾನೆ. ಬಸವಣ್ಣ, ಬುದ್ಧ ಅವರಂತಹ ಪ್ರಜ್ಞಾವಂತರಿಗೆ ಈ ಲೌಕಿಕ ನಿಯಮಗಳ ಬಂಧನವೇ ಇರಲಿಲ್ಲ. ಹಾಗೆ ನೋಡಿದರೆ ಅವರು ನಿಜವಾದ ಅರ್ಥದಲ್ಲಿ ಮಾನವರಾಗಿದ್ದರು. ಅವರು ಜೀವನದ ಆದರ್ಶ ಗುಣಗಳನ್ನು ಮೈಗೂಡಿಸಿಕೊಂಡು ನಿಜವಾದ ಮಾನವರಾಗಿದ್ದರು. ಅವರಿಗೆ ಅಂತಹ ಸಾರ್ಥಕ ಬದುಕೇ ಸಂವಿಧಾನವಾಗಿತ್ತು.

ನಮಗಿಂದು ಕಾನೂನು, ಸರ್ಕಾರ, ನ್ಯಾಯಾಲಯ, ಪೊಲೀಸು ಇವೆಲ್ಲ ಬೇಕಾಗಿರಲು ಕಾರಣವೆಂದರೆ, ನಾವು ನಮ್ಮ ಸಹಜ ನಡೆ ತಪ್ಪಿದ್ದು, ನಾವು ಇಷ್ಟೆಲ್ಲ ವ್ಯವಸ್ಥೆಗಳನ್ನು, ಕಟ್ಟುಪಾಡುಗಳನ್ನು ಮಾಡಿಕೊಂಡಿದ್ದೇವೆ. ಆದರೆ, ನಾವು ಅವುಗಳಿಗಾದರೂ ಬದ್ಧರಾಗಿದ್ದೇವೆಯೇ ಎಂದರೆ ಉತ್ತರ ಹೇಳುವುದು ಕಷ್ಟವಾಗುತ್ತದೆ. ನಾವಿಂದು ಸಂವಿಧಾನ ನೀಡಿದ 'ಸ್ವಾತಂತ್ರ್ಯ' ಪದವನ್ನು ತಮಗಿಷ್ಟವಾದ ರೀತಿಯಲ್ಲಿ ವ್ಯಾಖ್ಯಾನಿಸುತ್ತಿದ್ದೇವೆ. ಸ್ವಾತಂತ್ರ್ಯ ಎನ್ನುವುದು ನಮ್ಮ ಜನ್ಮಸಿದ್ಧ ಹಕ್ಕು ಎಂಬ ಹೇಳಿಕೆಯನ್ನು ತಿರುಚುತ್ತಿದ್ದೇವೆ. ಈ ಬೆಳವಣಿಗೆ ವಿಷಾದದ ಸಂಗತಿ. ಹೊಣೆಗಾರಿಕೆ ಇಲ್ಲದ ಸ್ವಾತಂತ್ರ್ಯ ಅದೊಂದು ಸ್ವೇಚ್ಛಾ ಪ್ರವೃತ್ತಿಯಾಗುತ್ತದೆ. ಇದು ಒಂದು ರೀತಿಯಲ್ಲಿ ಬೋನಿನಲ್ಲಿದ್ದ ಸಿಂಹವನ್ನು ಹೊರಗೆ ಬಿಟ್ಟಂತಾಗುತ್ತದೆ.

ಸ್ವಾತಂತ್ರ್ಯವೆಂದರೆ, ಸ್ವಚ್ಛಂದ ಪ್ರವೃತ್ತಿಯಲ್ಲ. ಸಂವಿಧಾನದಲ್ಲಿರುವ ನಿಯಮಗಳ ಪರಿಪಾಲನೆ. ಅದೊಂದು ಆತ್ಮವಿಕಾಸಕ್ಕೆ ರಕ್ಷೆ, ತ್ರಿವಿಧದಾಸೋಹಿ ಪರಮಪೂಜ್ಯಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ಮಂಗಳ ನುಡಿಗಳಲ್ಲಿ ಹೇಳಿರುವಂತೆ "ಸ್ವಾತಂತ್ರ್ಯ ಅರ್ಥವತ್ತಾಗಬೇಕಾದರೆ, ಶಕ್ತಿವತ್ತಾಗಬೇಕಾದರೆ ಜನರಲ್ಲಿರುವ ತಪ್ಪು ಕಲ್ಪನೆ, ಭ್ರಮೆ ಹೋಗಬೇಕು. ಅವರ ಭ್ರಮೆ, ಸ್ವಾತಂತ್ರ್ಯವೆಂದರೆ ಕಾಮಧೇನು, ಕಲ್ಪವೃಕ್ಷ, ಸಕಲ ಇಷ್ಟಾರ್ಥಗಳನ್ನೀವ ಶಕ್ತಿ ಎಂದು ಭಾವಿಸಿದ್ದಾರೆ. ವಿದ್ಯಾರ್ಥಿಗಳು ಓದದೆ ರ್‍ಯಾಂಕು ಪಡೆಯಬೇಕು. ರೈತರು ಕಷ್ಟಪಟ್ಟು ವ್ಯವಸಾಯ ಮಾಡದೆ ಹುಲುಸು ಬೆಳೆಯನ್ನು ಪಡೆಯಬೇಕು, ಬೆಸ್ತ, ಕಾರ್ಮಿಕರು, ಬಂಡವಾಳಗಾರರು, ಅಧಿಕಾರಿಗಳು, ಎಲ್ಲಾ ವರ್ಗದ ಜನರಿಗೂ ಕಷ್ಟಬೇಡ, ಬೆವರು ಸುರಿಸುವ ದುಡಿಮೆ ಬೇಡ, ಕರ್ತವ್ಯ ಬೇಡ, ಹಣಬೇಕು, ಫಲಬೇಕು, ಮೋಡಗಳಿಲ್ಲದೆ ಮಳೆ ಸುರಿಯಬೇಕು. ಈ ಕೀಳು ಮನೋಭಾವದ ಅಂಟುಜಾಡ್ಯ ತೊಲಗದ ಹೊರತು ಸ್ವಾತಂತ್ರ್ಯದ ಸಾರ್ಥಕತೆ ಇಲ್ಲ." ಪೂಜ್ಯ ಶ್ರೀಗಳವರ ಒಂದೊಂದು ನುಡಿಯೂ ಚಿಂತನಾರ್ಹವಾದದ್ದು.

ಲೇಖಕರಿಗೆ, ಪತ್ರಿಕೆಯ ಚಂದಾದಾರರಿಗೆ, ಜಾಹಿರಾತುದಾರರಿಗೆ ಸ್ವಾತಂತ್ರ್ಯ ದಿನೋತ್ಸವದ ಹಾರ್ದಿಕ ಶುಭಾಶಯಗಳು.

ಪ್ರೊ. ಹೆಚ್.ವಿ. ವೀರಭದ್ರಯ್ಯ







## ಶ್ರೀವಾಣಿ

### 'ದ' ಕಾರದ ರಹಸ್ಯ

ಬೃಹದಾರಣ್ಯಕೋಪನಿಷತ್ತಿನಲ್ಲಿ ಬರುವ ಒಂದು ಕಥೆ. ಪ್ರಜಾಪತಿಬ್ರಹ್ಮನಿಗೆ ದೇವತೆಗಳು, ಮನುಷ್ಯರು ಮತ್ತು ರಾಕ್ಷಸರೆಂಬುದಾಗಿ ಮೂರು ಮಂದಿ ಮಕ್ಕಳು. ಅವರೆಲ್ಲರೂ ಒಟ್ಟಿಗೆ ಆ ಬ್ರಹ್ಮನ ಬಳಿ ಹೋಗಿ 'ತಂದೆಯೆ! ನಮಗೆ ಏನಾದರೂ ಉಪದೇಶ ಮಾಡು' ಎಂದು ಕೇಳಿದಾಗ ಆಗ ಆ ಪ್ರಜಾಪತಿಬ್ರಹ್ಮ ನೀವು ಒಂದು ವರ್ಷಕಾಲ ಬ್ರಹ್ಮಚರ್ಯವ್ರತವನ್ನಾಚರಿಸಿ ನಂತರ ಬನ್ನಿರಿ; ಉಪದೇಶ ಮಾಡುವೆನೆಂದು ಹೇಳಿ ಕಳುಹಿಸಿದ. ಅದರಂತೆ ಎಲ್ಲರೂ ಬ್ರಹ್ಮಚರ್ಯವ್ರತವನ್ನಾಚರಿಸಿ ಉಪದೇಶ ಪಡೆಯಲು ಬಂದರು. ಆಗ ಆ ಪ್ರಜಾಪತಿಬ್ರಹ್ಮ ಎಲ್ಲರನ್ನೂ ಒಟ್ಟಿಗೆ ಕೂರಿಸಿಕೊಂಡು ದ ದ ದ ಎಂಬುದಾಗಿ ಒಂದೇ ಮಂತ್ರವನ್ನು ಉಪದೇಶ ಮಾಡಿದ. ಅವರೆಲ್ಲರನ್ನೂ ಕೇಳಿದ 'ನಿಮಗೆಲ್ಲರಿಗೂ ಮಂತ್ರ ಅರ್ಥವಾಯಿತೆ? ಎಂಬುದಾಗಿ. ಎಲ್ಲರೂ ತಲೆಯನ್ನು ಅಲ್ಲಾಡಿಸಿದರು. ಆಗ ಪ್ರಜಾಪತಿ ಒಬ್ಬೊಬ್ಬರನ್ನೇ ಕರೆದು ಮಂತ್ರದ ರಹಸ್ಯವನ್ನು ಹೇಳಿದ. ಮೊದಲು ದೇವತೆಗಳನ್ನು ಕರೆದು 'ನೀವು ವಿಷಯ ಭೋಗರತರು, ಆದ್ದರಿಂದ ನೀವು 'ದ'; ಅಂದರೆ ಇಂದ್ರಿಯಗಳನ್ನು ದಮನ ಮಾಡಿಕೊಳ್ಳಬೇಕು' ಎಂದು ಹೇಳಿದ. ನಂತರ ಮನುಷ್ಯರನ್ನು ಕರೆದು 'ನೀವು ಮನುಷ್ಯರು ಲೋಭಿಗಳು, ಸ್ವಾರ್ಥಿಗಳು, ಏನೆಲ್ಲವೂ ನನಗೇ ಇರಲಿ ಎನ್ನುವಿರಿ. ಆದರಿಂದ ನಿಮಗೆ 'ದ' ಎಂದರೆ ದಾನ ಮಾಡಿ(ದದತು) ಎಂದರ್ಥ' ಎಂದ. ಕೊನೆಯಲ್ಲಿ ರಾಕ್ಷಸರನ್ನು ಕರೆದು 'ನೀವು ಕ್ರೂರಿಗಳು, ಹಿಂಸಾಪ್ರಿಯರು ಆದ್ದರಿಂದ 'ದ' ಎಂದರೆ ನಿಮಗೆ ದಯೆ ಎಂದರ್ಥ' ಎಂದು ಹೇಳಿದ. ಹೀಗೆ ಉಪದೇಶವೊಂದೇ ಆದರೂ; ಅವರವರ ಸಂಸ್ಕಾರಕ್ಕನುಗುಣವಾಗಿ ತಾತ್ಪರ್ಯವನ್ನು ಗ್ರಹಿಸುತ್ತಾರೆ. ಇದರಂತೆ ದೊಡ್ಡವರು ಹೇಳುವುದು ಒಂದೇ ಆದರೂ; ನಾವು ನಮ್ಮ ನಮ್ಮ ಸಂಸ್ಕಾರಕ್ಕನುಗುಣವಾಗಿ ಅರ್ಥಮಾಡಿಕೊಳ್ಳುತ್ತೇವೆ.

* * *

### ಚಿನ್ನದ ನಲ್ಲಿಯಲ್ಲಿ ನೀರೇ ಬರಲಿಲ್ಲ

ಒಬ್ಬ ಶ್ರೀಮಂತನಿದ್ದ. ಭರ್ಜರಿ ಬಂಗಲೆ ಕಟ್ಟಿಸಿದ. ಮನೆಗೆಲ್ಲಾ ಬೆಳ್ಳಿಯ ಪೈಪನ್ನು ಹಾಕಿಸಿದ. ಚಿನ್ನದ ನಲ್ಲಿಗಳನ್ನು ಫಿಕ್ಸ್ ಮಾಡಿಸಿದ. ಗೃಹಪ್ರವೇಶದ ದಿನದಂದು ನಲ್ಲಿಯ ಉದ್ಘಾಟನೆಯ ಸಮಾರಂಭವನ್ನು ಏರ್ಪಡಿಸಿದ. ಗಣ್ಯಾತಿಗಣ್ಯರೆಲ್ಲರನ್ನೆಲ್ಲಾ ಆಹ್ವಾನಿಸಿದ. ಸಮಾರಂಭಕ್ಕೆ ಭಾರಿ ಖರ್ಚು ಮಾಡಿದ. ಒಬ್ಬ ಗಣ್ಯವ್ಯಕ್ತಿಯ ಅಮೃತಹಸ್ತದಿಂದ ಚಿನ್ನದ ನಲ್ಲಿಯನ್ನು ಉದ್ಘಾಟನೆ ಮಾಡಿಸಿದ. ಆದರೆ ನಲ್ಲಿಯಲ್ಲಿ ನೀರೇ ಬರಲಿಲ್ಲ. ನೀರು ಏಕೆ ಬರಲಿಲ್ಲ ಎಂಬುದಕ್ಕೆ ಚೆಕ್ ಮಾಡಿಸಿದ. ಆಗ ಗೊತ್ತಾಯಿತು ಮೈನ್ ಪೈಪಿಗೇ ಕನೆಕ್ಷನ್ ಕೊಟ್ಟಿಲ್ಲ ಎಂದು.

ಇದರಂತೆ ನಾವೆಷ್ಟೇ ಶ್ರೀಮಂತರಾಗಿದ್ದರೂ ಶರಣರ ಸಂಗದ ಕನೆಕ್ಷನ್ ಇಲ್ಲದಿದ್ದರೆ ಅನುಭಾವದ ಜಲವೇ ಬರುವುದಿಲ್ಲ.

# ವಚನ-ತ್ರಿವಿಧಿ

## ಶ್ರೀ ಸಿದ್ಧಲಿಂಗೇಶ್ವರ ವಚನ

**ಡಂಬು ಮತ್ಸರಕ್ಕೆ ಇಂಬುಗೊಡದಿರಬಲ್ಲಡೆ ಶರಣ**
**ಶಂಭು ಪದ ಪದ್ಮಭಕ್ತಿ ನಂಬುಗೆವಿಡಿದು ಅಗಲದಿರಬಲ್ಲಡೆ ಶರಣ**
**ಸೂಸಲಿಯ್ಯದೆ ಮನವನೀಶವಾಸದಲ್ಲಿ ಮೀಸಲಾಗಿರಿಸಿಕೊಂಡಿರಬಲ್ಲಡೆ**
**ಆ ಶರಣನ ಜಗದೀಶ್ವರನೆಂಬೆನು ಕಾಣಾ**
**ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ ॥**

ಮಹೇಶ್ವರನ ಶರಣ – ಮಹೇಶ್ವರಸ್ಥಲದೊಳಗಣ ಶರಣಸ್ಥಲದಾಚರಣೆಯನು ನಿರೂಪಿಸಿಹರು : ಡಂಬು ಮತ್ಸರಕ್ಕೆ: ಡಂಬು–ಹಿರೆತನದ ಬೂಟಕತ್ವವು, ಮತ್ಸರಕ್ಕೆ – ಕೇಣಸರಕ್ಕೆ, ಇಂಬುಗೊಡದಿರಬಲ್ಲಡೆ – ತೆರಹು ಗೊಡದಿರಬಲ್ಲಡೆ, ಶರಣ–ಶಿವಶರಣನು, ಶಂಭು–ಸುಖೋತ್ಪತ್ತಿಯ ಜನಕನಾದಂಥ ಪರಶಿವಲಿಂಗದ, ಪದಪದ್ಮಭಕ್ತಿ – ಪಾದಕಮಲದ ಶ್ರದ್ಧೆಯು, ನಂಬುಗೆವಿಡಿದು–ವಿಶ್ವಾಸವನು ದೃಢವಿಡಿದು, ಅಗಲದಿರಬಲ್ಲಡೆ – ವಿಯೋಗವಾಗದೆ ಕೂಡಿರಬಲ್ಲರೆ, ಶರಣ – ಶಿವಶರಣನು, ಸೂಸಲಿಯ್ಯದೆ ಮನವ–ಮನವು ಹಲವು ನೆನೆಹು, ಹಲವು ಭಾಷೆ, ಹಲವು ವರ್ತನೆಯೊಡನೆ ಕೂಡಿ ಚರಿಸಿ ಚಾಗೆಯಾಗದೊಡನೆ, ಈಶಪದದಲ್ಲಿ – ಮಹಾಲಿಂಗಪದದಲ್ಲಿ, ಮೀಸಲಾಗಿರಿಸಿಕೊಂಡಿರಬಲ್ಲಡೆ – ಉನ್ನನೆ ಮನಸ್ಸಾಗಿ ಅಳವಡಿಸಿಕೊಂಡಚರಿಸುತ್ತಿರಬಲ್ಲರೆ, ಆ ಶರಣನ – ಶಿವಶರಣನ, ಜಗದೀಶ್ವರನೆಂಬೆನು – ಜಗತ್ಕರ್ತೃವಾದ ಪರಶಿವಲಿಂಗವೆಂದು ಹೇಳುವೆನು. ಕಾಣಾ–ಕಂಡಾ, ಮಹಾಲಿಂಗಗುರು ಶಿವಸಿದ್ಧೇಶ್ವರಪ್ರಭುವೆ.

(ಕೃಪೆ: ತೋಂಟದಾರ್ಯ ವಚನ ವ್ಯಾಖ್ಯೆ- ಸಂಪಾದಕರು- ಡಾ॥ ಸಾ.ಶಿ. ಮರುಳಯ್ಯ, ಪ್ರಕಾಶಕರು, ಶ್ರೀ ತೋಂಟದ ಸಿದ್ಧಲಿಂಗೇಶ್ವರ ಕೈಂಕರ್ಯ (ದಾಸೋಹ) ಸೇವಾ ಸಂಘ (ರಿ.) ಎಡೆಯೂರು-ಕುಣಿಗಲ್ ತಾಲ್ಲೂಕು, ತುಮಕೂರು ಜಿಲ್ಲೆ)

## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ಅರಿವು ಪ್ರಾಣಲಿಂಗ ಗುರುತಾಭಾವಲಿಂಗ
ವರದ ಜಂಗಮವೆ ಮಹಲಿಂಗ । ತಾನೆಂದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ವಿಜ್ಞಾನವೆಂಬುದು ಸುಜ್ಞಾನವೆ ದಾಸೋಹ
ಪರಮಾತ್ಮ ಜ್ಞಾನಕ್ಕೆ ಶಿವನಾಳು । ತಾನೆಂದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಸಂಸಾರವೆಂಬುದು ಸರ್ಪನಹೆಡೆಯಡಿಯ
ಹಸಿದ ಕಪ್ಪೆಯ ತೆರನೆಂದೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಎತ್ತಾಗಿ ದುಡಿಯಣ್ಣ ತೊತ್ತಾಗಿ ದುಡಿಯಣ್ಣ
ಹೊತ್ತು ಹೋಗುವ ಮುನ್ನ ದುಡಿಯಣ್ಣ । ನೀನೆಂದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಮಾತು ಕ್ಷೀರವಾಗಿ ಮನವು ಮಲ್ಲಿಗೆಯಾಗಿ
ಚಿತ್ತ ಚಿದ್ಬೆಳಗಾಗಿ ಕರಸ್ಥಲದಿ । ನೀನಿರುವೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

'ಹೊತ್ತು ಹೋಗದ ಮುನ್ನ ಮೃತ್ಯು ಮುಟ್ಟದ ಮುನ್ನ'
ಮುತ್ತಿನಂಥ ಬಾಳು ನಿನದಿರಲಿ । ಹರಸಿದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ತಾಯಿ ತನ್ನ ಮಗುವನ್ನು ಬಾಚಿ ತಬ್ಬುವಂತೆ
ನೀ ತಬ್ಬಿದೆ ಗುರುವೆ ಜಗವನ್ನು । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಕಾವಿ ಎಂಬುದು ಜಗದ ಕಾಮವ ಬಿಟ್ಟು
ಕಾವಿ ಕಾರುಣ್ಯದ ಹರಿಸಿದ್ದು । ನೀವೆಂದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಇಂದು ನಾಳೆಯೆಂಬ ಸಂದೇಹವೇತಕೆ
ಮುಂದರಿದು ನಡೆನೀನು ನಿಜಪಥದಿ । ತಾನೆಂದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಭಕ್ತಿಯೆಂಬುದು ತಾನು ಮುಕ್ತಿಗೆ ಸೋಪಾನ
ಶಕ್ತಿ ಸಂಚಯಕೆ ನಿಚ್ಚಣಿಕೆ । ತಾನೆಂದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

**ಪ್ರೊ. ಹೆಚ್.ವಿ. ವೀರಭದ್ರಯ್ಯ**



# ಚಿಂತನೆ

## ಶ್ರೀವಾಣಿ ಎಂದರೇನು ?

– ಕೋ.ರಂ. ಬಸವರಾಜು *

('ಸಿದ್ಧಗಂಗಾ' ಮಾಸಪತ್ರಿಕೆಯನ್ನು ತೆರೆದರೆ ಸಾಕು 'ಶ್ರೀವಾಣಿ' ಓದುಗರನ್ನು ತನ್ನತ್ತ ಸೆಳೆಯುತ್ತದೆ. ಅದರ ಒಂದು ಇಣುಕು ನೋಟ ಇಲ್ಲಿದೆ)

ಶ್ರೀ ಸಿದ್ಧಗಂಗಾಮಠದಲ್ಲಿ ಒಟ್ಟೊಟ್ಟಿಗೆ ಆರಂಭಗೊಂಡ ನಿತ್ಯದಾಸೋಹ, ನಿಯತ ಸಂಸ್ಕೃತಾಭ್ಯಾಸ, ನಿತ್ಯಸಾಮೂಹಿಕ ಪ್ರಾರ್ಥನೆ ಇವು ಈ ಹೊತ್ತಿಗೂ ಮಠದ ನಿತ್ಯನಿರಂತರ ನಡವಳಿಕೆಗಳಾಗಿವೆ. ಶ್ರೀಮಠದಲ್ಲಿ ನಡೆಯುವ ಸಂಧ್ಯಾ ಕಾಲದ ಸಾಮೂಹಿಕ ಪ್ರಾರ್ಥನೆಯಂತೂ ಅತ್ಯದ್ಭುತ. ವಿದ್ಯಾರ್ಥಿಗಳು ಹೊದ್ದ ವಸ್ತ್ರದ ಕೆಂಬಣ್ಣ, ಶ್ರೀಗಳ ಕಾವಿಯುಡುಗೆಯ ಹೊಂಬಣ್ಣ, ಸಂಧ್ಯೆಯ ಮುಖರಾಗ ಇವು ಮೂರರ ಬಣ್ಣದ ಕಿರಣದ ಮಿಲನದಿಂದ ಹೊಸ ಸಗ್ಗವೇ ಸೃಷ್ಟಿಗೊಂಡು ಸಿದ್ಧಗಂಗೆಯ ಧರೆಗಿಳಿದು ಬಂದಂತೆ ಭಾಸವಾಗುತ್ತದೆ. ಅದರ ಜೊತೆಗೆ ಮುಗಿಲ ಭೇದಿಸುವ ವಿದ್ಯಾರ್ಥಿಗಳ ಪ್ರಾರ್ಥನೆಯ ತಾರಧ್ವನಿ, ಕೊನೆಯಲ್ಲಿ ಶ್ರೀಗಳ ಶ್ರೀಮುಖದಿಂದ ಹೊರಹೊಮ್ಮುತ್ತಿದ್ದ ಶ್ರೀವಾಣಿ–ಹೀಗೆ ಇವುಗಳಿಂದ ಪ್ರಾರ್ಥನೆಯೊಂದು ನೋಡುಗರಿಗೆ, ರಮ್ಯರಮಣೀಯವಾಗಿತ್ತು. ಈ ದಿವ್ಯದೃಶ್ಯ ಇಂದಿಗೂ ಮುಂಬರಿಯುತ್ತಿದ್ದು ಬಂದ ಭಕ್ತಜನ ಕಣ್ಮನಗಳನ್ನು ತುಂಬಿಕೊಳ್ಳುತ್ತಿದ್ದಾರೆ.

ಪರಮಪೂಜ್ಯರ 'ಶ್ರೀವಾಣಿ'ಗೊಂದು ವಿಶಿಷ್ಟವಾದ ಅರ್ಥವಿದೆ. ನಾನು ಎಪ್ಪತ್ತರ ದಶಕದಲ್ಲಿ ಸಿದ್ಧಗಂಗಾ ಮಾಸಪತ್ರಿಕೆಗಾಗಿ ಶ್ರೀವಾಣಿಯನ್ನು ಸಂಗ್ರಹಿಸಿಕೊಡುವಾಗ ಆ ಪದಕ್ಕಿರುವ ಅರ್ಥದ ವಿಶಿಷ್ಟತೆಯನ್ನು ನನ್ನ ಮತಿಯ ಮಿತಿಯೊಳಗೆ ಪರಿಭಾವಿಸಿದ್ದು ಹೀಗೆ: ಮಹಾತ್ಮರಾಡುವ ಮಾತನ್ನು ಅರ್ಥಗೌರವದಿಂದ 'ವಾಣೀ'ಎಂದೂ, ಅದರಲ್ಲಿ ಪೂಜ್ಯತ್ವ ಅಮೃತತ್ವಾದಿಗಳಿರುವುದರಿಂದ 'ಆರ್ಯವಾಣೀ' 'ಅಮೃತವಾಣೀ' ಮುಂತಾಗಿ ಕರೆಯುತ್ತೇವೆ.

ಈ ಹಿನ್ನೆಲೆಯಲ್ಲಿ ನಮ್ಮ ಪರಮಪೂಜ್ಯರ ವಾಣಿಯನ್ನು 'ಶ್ರೀವಾಣೀ' ಎಂದು ಕರೆಯುವುದರಲ್ಲಿ ಅರ್ಥವಂತಿಕೆಯಿದೆ. 'ಶ್ರಿಯಃ ಪ್ರದುಗ್ಧೇ ವಾಣೀ=ಶ್ರೀವಾಣೀ' ಯಾವ ಪರಮಪೂಜ್ಯರ ವಾಣಿಯು ಶ್ರೀಯನ್ನು ಸಂಪತ್ತನ್ನು ಅಂದರೆ ಶ್ರೇಯಸ್ಸು ಪ್ರೇಯಸ್ಸು ಯಶಸ್ಸು ಜ್ಞಾನ ಗೌರವಾದಿ ಸಂಪತ್ತನ್ನು (ಕರೆಯುತ್ತದೆಯೋ) ಕೊಡುವುದರಿಂದ ಅದಕ್ಕೆ 'ಶ್ರೀವಾಣೀ' ಎಂದು ಹೆಸರು. ಇಂಥ ಸಿರಿಯ ದೋಹನ ಶಕ್ತಿ ನಮ್ಮ ಪೂಜ್ಯ ಗುರುದೇವರಾದ ಶ್ರೀ ಶ್ರೀ ಶ್ರೀಶಿವಕುಮಾರಮಹಾಶಿವಯೋಗಿಗಳ ವಾಣಿಯಲ್ಲಿತ್ತು. ಅದು ಜಗತ್ತಿಗೆ ಸಂದೇಶವನ್ನು ಕೊಡುವ ವಾಣಿಯೂ ಆಗಿತ್ತು.

ಇಂಥ ಪರಮಪೂಜ್ಯರ ವಾಣಿಯು ಗುಣಪಂಚಕದಿಂದ ಕೂಡಿತ್ತು. ಮನೋಹಾರಿತ್ವ, ಹಿತಪರಿಣಾಮಕಾರಿತ್ವ, ಋಜುತ್ವ (ನೇರ) ಅರ್ಥಗೌರವ ಮತ್ತು ಅರ್ಥದೀಪ್ತಿಗಳೇ ಆ ಗುಣಪಂಚಕ.

ಇವನ್ನೇ ಬಸವಣ್ಣನವರ ವಚನ ಸೂತ್ರಗೊಳಿಸಿದೆ.

**'ನುಡಿದರೆ ಮುತ್ತಿನ ಹಾರದಂತಿರಬೇಕು; ನುಡಿದರೆ ಮಾಣಿಕ್ಯದ ದೀಪ್ತಿಯಂತಿರಬೇಕು**
**ನುಡಿದರೆ ಸ್ಫಟಿಕದ ಸಲಾಕೆಯಂತಿರಬೇಕು; ನುಡಿದರೆ ಲಿಂಗಮೆಚ್ಚಿ ಅಹುದಹುದೆನಬೇಕು**
**ನುಡಿಯೊಳಗಾಗಿ ನಡೆಯದಿದ್ದಡೆ ಕೂಡಲಸಂಗಮದೇವನೆಂತೊಲಿವನಯ್ಯಾ?'**

ಇಂಥ ವಾಣಿಯು ಅದೆಷ್ಟೋ ಮಂದಿಗೆ ಬಹುವಿಧದಲ್ಲಿ ಶ್ರೇಯಸ್ಸನ್ನೂ; ಪ್ರೇಯಸ್ಸನ್ನೂ ತಂದುಕೊಟ್ಟಿದೆ. ಎಳೆಯರ ಎದೆಯಲ್ಲಿ ಪ್ರತಿಭೆಯನ್ನು ಅರಳಿಸಿದೆ. ಯುವಕರ ಬದುಕಿಗೆ ತಿರುವು ಕೊಟ್ಟಿದೆ. ವಯಸ್ಕರಿಗೆ ವ್ಯಕ್ತಿತ್ವ ಹಾಗೂ ಘನತೆಯನ್ನು ತಂದುಕೊಟ್ಟು ಗೌರವಾನ್ವಿತರಾಗಿ ಬಾಳುವಂತೆ ಮಾಡಿದೆ. ವೃದ್ಧರ ಹೃದಯದಲ್ಲಿ ನೆಲೆನಿಂತು ನೆಮ್ಮದಿ ನೀಡಿದೆ.

ಶ್ರೀಮಠದ ಹಳೆಯ ವಿದ್ಯಾರ್ಥಿಗಳಿಗಂತೂ ಸದುವಿನಯದ ಶಿಸ್ತುಬದ್ಧವಾದ, ಸಜ್ಜನಿಕೆಯ, ಸರ್ವತೋ ಮುಖವಾದ ವ್ಯಕ್ತಿತ್ವದ ನಿರ್ಮಾಣಕ್ಕೆ ಮೂಲದ್ರವ್ಯವಾಗಿದೆ.

* ನಿವೃತ್ತ ಪ್ರಾಧ್ಯಾಪಕರು. 'ಮಧುಕೇಶ್ವರ ನಿಲಯ, ಶಿನೇ ಕ್ರಾಸ್, ಎಸ್.ಐ.ಟಿ. ಬಡಾವಣೆ, ತುಮಕೂರು.

ಲೇಖನ

# ಮಾತೆಂಬುದು ಜ್ಯೋತಿರ್ಲಿಂಗ

– ಆರ್.ಎಸ್. ಚಾಪಗಾವಿ *

**ಮಾತೆಂಬುದು ಜ್ಯೋತಿರ್ಲಿಂಗ, ಸ್ವರವೆಂಬುದು ಪರತತ್ತ್ವ**
**ತಾಳೋಷ್ಠ ಸಂಪುಟವೆಂಬುದು ನಾದಬಿಂದುಕಳಾತೀತ**
**ಗುಹೇಶ್ವರನ ಶರಣರು ನುಡಿದು ಸೂತಕಿಗಳಲ್ಲ ಕೇಳಾ ಮರುಳೆ.**

ಜಗತ್ತಿನಲ್ಲಿ ಮನುಷ್ಯ ಜೀವಿಗೆ ಮಾತ್ರ ಮಾತನಾಡುವ ಶಕ್ತಿ ಇದೆ. ಇದು ದೇವರು ಮಾನವನಿಗೆ ಕೊಟ್ಟ ವರದಾನವಾಗಿದೆ. ಮಾತು ಮಾನವನ ಮೊದಲ ಸಂಪರ್ಕ ಸಾಧನವಾಗಿದೆ. ಮಾನವನ ನಿತ್ಯ ಜೀವನದಲ್ಲಿ ಮಾತು ಬಹುದೊಡ್ಡ ಪಾತ್ರವಹಿಸುತ್ತದೆ. ಮಾನವನು ಓರ್ವ ಸಂಘ ಜೀವಿಯಾಗಿದ್ದು, ತನ್ನ ಅನುಭವ ಅನಿಸಿಕೆಗಳನ್ನು ಹಂಚಿಕೊಳ್ಳುವುದು, ತನ್ನ ಬೇಕು ಬೇಡಗಳನ್ನು ವ್ಯಕ್ತಪಡಿಸುವುದು ಮಾತಿನ ಮೂಲಕವೇ. ಯಾವ ಜೀವಿಗೂ ಇರದ ಈ ವಿಶೇಷ ಶಕ್ತಿಯು ದೇವರು ನಮಗೆ ಕೊಟ್ಟ ಅದ್ಭುತ ಕೊಡುಗೆಯಾಗಿದೆ. ಸಪ್ತಸ್ವರ ಭಾವನ್ನಕ್ಷರಗಳನ್ನೊಳಗೊಂಡ ಮಾತನ್ನು ನಾವು ದಕ್ಷತೆಯಿಂದ ಬಳಸಿಕೊಂಡು ನಮ್ಮ ಜೀವನವನ್ನು ಸುಖಮಯಗೊಳಿಸಿಕೊಳ್ಳಬೇಕು. ಅದಕ್ಕೆ ಅಲ್ಲಮಪ್ರಭು 'ಮಾತೆಂಬುದು ಜ್ಯೋತಿರ್ಲಿಂಗ' ಎಂದಿದ್ದಾರೆ. ಜ್ಯೋತಿರ್ಲಿಂಗ ಸ್ವರೂಪವಾದ ಮಾತನ್ನು ಸಮರ್ಥವಾಗಿ ಬಳಸಿಕೊಂಡು ಬಸವಾದಿ ಶರಣರು ಸಾರ್ಥಕ ಜೀವನ ನಡೆಸಿದರು. ಅವರ ಮಾತೆಲ್ಲ ಮಂತ್ರಗಳಾದವು. ಅವರ ಹಿತನುಡಿಗಳೆ ವಚನಗಳಾದವು.

**ಮಾತಿನಿಂ ನಗೆ ನುಡಿಯು, ಮಾತಿನಿಂ ಹಗೆ ಕೊಲೆಯು**
**ಮಾತಿನಿಂ ಸರ್ವ ಸಂಪದವು ಲೋಕಕ್ಕೆ**
**ಮಾತೆ ಮಾಣಿಕವು ಸರ್ವಜ್ಞ**

ಮಾತಿನಿಂದ ನಗೆಯನ್ನು ಹರಿಸಬಹುದು, ಮಾತಿನಿಂದ ಹಗೆಯನ್ನು ಸಾಧಿಸಬಹುದು, ಮಾತಿನಿಂದ ಸಕಲ ಸಂಪತ್ತನ್ನು ಸಾಧಿಸಬಹುದು. ಜವಾಬ್ದಾರಿಯಿಂದ ಮಾತನ್ನು ಬಳಸಬೇಕೆಂಬ ಹಿತನುಡಿಯನ್ನು ಸರ್ವಜ್ಞ ಹೇಳಿರುವನು. ಮಾತು ಕುರಿತು ನಮ್ಮ ಜನಪದ ಲೋಕದಲ್ಲಿ ಸಾಕಷ್ಟು ಚಿಂತನೆ ಇರುವುದನ್ನು ಕಾಣುತ್ತೇವೆ. 'ಮಾತೇ ಮುತ್ತು, ಜಾಣ ಮಾತೇ ಕೇಡಿನ ತಾಣ', 'ಮಾತು ಬಲ್ಲವ ಮಾಣಿಕ್ಯ ತಂದ, ಮಾತರಿಯದವ ಜಗಳ ತಂದ', 'ಮಾತು ಮನೆ ಕೆಡಿಸಿತು, ತೂತು ಒಲೆ ಕೆಡಿಸಿತು', 'ಮಾತು ಆಡಿದರೆ ಹೋಯಿತು, ಮುತ್ತು ಒಡೆದರೆ ಹೋಯಿತು', 'ಆಡಿದ ಮಾತು, ಬಿಟ್ಟ ಬಾಣ ಹಿಂತಿರುಗಿ ಬರಲಾರವು', 'ಮಾತು ನಡೆವವನು ತುಂಬಿದ ಕೊಡದ ಹಾಗೆ, ನಡೆಯದವನು ಅರಗೊಡ', 'ಮಾತು ಬಲ್ಲವ ಬರಗಾಲಲ್ಲೂ ಬದುಕಬಲ್ಲ', 'ಮಾತಿನಂತೆ ನಡೆ ಇದೇ ಜನ್ಮಕಡೆ' ಹೀಗೆ ಮಾತಿನ ಬಗ್ಗೆ ನೂರಾರು ಉಕ್ತಿಗಳು, ನಾಣ್ನುಡಿಗಳು, ಜಾಣ್ನುಡಿಗಳು ಇರುವವು. ಒಳ್ಳೆಯ ನುಡಿ ನಡೆಗಳು ನಮ್ಮ ಬಾಳಿಗೆ ಭೂಷಣವಾಗಿರುವವು. ನಮ್ಮ ಬಾಳಿಗೆ ದಾರಿದೀಪಗಳಾಗಿರುವವು.

ಮನುಷ್ಯನ ವ್ಯಕ್ತಿತ್ವ ಪ್ರಕಟವಾಗುವುದು ಆತನ ವ್ಯಕ್ತಿತ್ವ ಉಜ್ವಲವಾಗುವುದು; ಆತನ ನಡೆ ನುಡಿಗಳಿಂದ. ಮಾತು ಮುತ್ತಾಗಬೇಕು, ಮೃತ್ಯುವಾಗಬಾರದು. ಮಾತಿನಲ್ಲಿ ತೂಕವಿರಬೇಕು, ಮಾತಿನಲ್ಲಿ ಹಿಡಿತವಿರಬೇಕು, ಮಾತು ಅರ್ಥ ಇರಬೇಕು, ಸತ್ವ ಇರಬೇಕು, ಪ್ರೀತಿ ಇರಬೇಕು, ಮಾತಿನಲ್ಲಿ ಶಾಂತಿ, ಸಹನೆ, ಸೈರಣೆ, ಸಮಾಧಾನ ಇರಬೇಕು. ಮಾತಿನಲ್ಲಿ ಸತ್ಯವಿರಬೇಕು, ಇರಬೇಕು. ಅಂತಹ ನಲ್ನುಡಿಗಳ ಸೂಳ್ನುಡಿಗಳ ಮಂಥನವೇ ಸತ್ಸಂಗವೆನಿಸುವುದು. ಸಹಚಿಂತನ ಉಂಟಾದರೂ ಚಾರಿತ್ರ್ಯ ಹಾಳಾಗುತ್ತದೆ. ಆದ್ದರಿಂದ ಮಾತಾಡುವಾಗ ತುಂಬ ಜಾಗರೂಕರಾಗಿರಬೇಕು. ಮಾತಿನಲ್ಲಿ ತುಸುವೇ ಶಿಥಿಲತೆ

**ರಸಿಕನಾಡಿದ ಮಾತು ಶಶಿಯುದಿಸಿ ಬಂದಂತೆ**
**ರಸಿಕನಲ್ಲದನ ಬರಿಮಾತು ಕಿವಿಗೆ**
**ಕೂರ್ದಸಿಯ ಬಡಿದಂತೆ ಸರ್ವಜ್ಞ**

ರಸಿಕರ, ಸಜ್ಜನರ ಸವಿಮಾತುಗಳು ಬೆಳದಿಂಗಳಿನಂತೆ ಆಹ್ಲಾದಕರವಾಗಿರುತ್ತವೆ. ದುಷ್ಟರ ಕೆಟ್ಟ ನುಡಿಗಳು, ಕಿವಿಗೆ ಚೂಪಾದ ಗೂಟಬಡಿದಂತೆ, ಕರ್ಕಶವಾಗಿರುತ್ತವೆ ಎಂದು ಸರ್ವಜ್ಞ ಕವಿ ಹೇಳಿದ್ದಾನೆ. ಮಾತಿನ ಪೆಟ್ಟು, ಲತ್ತೆಯ ಪೆಟ್ಟಿಗಿಂತ ಕೆಟ್ಟದಾಗಿರುತ್ತದೆ. ಶರಣರ, ಸಹೃದಯರ, ಸಂತರ, ಮಹಂತರ ಅನುಭಾವದ ರಸಮಯ ಮಾತುಗಳು, ಕಿವಿಗೆ ಇಂಪು, ಮನಕ್ಕೆ ತಂಪು ನೀಡುತ್ತವೆ. ಸಿದ್ಧಗಂಗಾ ಮಠದ ಪರಮಪೂಜ್ಯ ಲಿಂ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು, ವಿಜಯಪುರ ಜ್ಞಾನಯೋಗಾಶ್ರಮದ ಶ್ರೀ ಸಿದ್ಧೇಶ್ವರ ಸ್ವಾಮಿಗಳು, ಗದುಗಿನ ತೋಂಟದಾರ್ಯ ಮಠದ ಲಿಂ. ಡಾ. ಸಿದ್ಧಲಿಂಗ ಸ್ವಾಮಿಗಳಂತವರ ಸಿರಿಕಂಠದಿಂದ ಬಂದ ನುಡಿಮುತ್ತುಗಳು ಅಮೃತ ಸಿಂಚನವಾದಂತಿದ್ದು; ಎಷ್ಟು ಹೊತ್ತು ಕೇಳಿದರೂ ಇನ್ನೂ ಕೇಳುತ್ತಲೇ ಇರಬೇಕೆನಿಸುತ್ತದೆ. ಇನ್ನೂ ಕೇವಲ ಬಾಯಿ ಚಪಲಕ್ಕೆ ಮಾತನಾಡುವವರೂ ಕೆಲವರಿರುತ್ತಾರೆ. ಪಾಂಡಿತ್ಯ ಪ್ರದರ್ಶನಕ್ಕೆ ಮಾತನಾಡು ವವರೂ ಹಲವರಿರುತ್ತಾರೆ. ಇಂಥವರನ್ನು ಕಂಡ ಅಕ್ಕಮಹಾದೇವಿ 'ಮಾತಿನ ಬಣವೆಯ ಮಿಟ್ಟಿಯ ಭಂಡಾರ ತೋರದಿರಯ್ಯಾ' ಎಂದು ತನ್ನೊಂದು ವಚನದಲ್ಲಿ ಹೇಳಿಕೊಂಡಿದ್ದಾಳೆ.

**ನುಡಿದರೆ ಮುತ್ತಿನ ಹಾರದಂತಿರಬೇಕು.**
**ನುಡಿದರೆ ಮಾಣಿಕ್ಯದ ದೀಪ್ತಿಯಂತಿರಬೇಕು.**
**ಮೃದು ವಚನವೆ ಸಕಲ ಜಪಂಗಳಯ್ಯಾ.**
**ಮೃದು ವಚನವೆ ಸಕಲ ತಪಂಗಳಯ್ಯಾ.**
**ಏನಿ ಬಂದಿರೆ ಹದುಳಿದ್ದಿರೆ ಎಂದರೆ,**
**ನಿಮ್ಮ ಐಸಿರಿ ಹಾರಿ ಹೋಹುದೆ ?**

ಮಾತಾಡುವ ಮಾತುಗಳು ಮುತ್ತಿನ ಹಾರದಂತೆ ಸುಂದರವಾಗಿರಬೇಕು, ಮಾಣಿಕ್ಯದ ದೀಪ್ತಿಯಂತೆ ಸ್ಪಷ್ಟವಿರಬೇಕು, ಸ್ಫಟಿಕದಂತೆ ಪಾರದರ್ಶಕವಿರಬೇಕು, ಮೃದು ವಚನಗಳೇ ಸಕಲ ಜಪಂಗಳು, ಸಕಲ ತಪಂಗಳು ಅಂಥ ಮಾತುಗಳಲ್ಲಿ ಅಗಾಧ ಶಕ್ತಿಯಿರುತ್ತದೆ. ಅಂಥ ಮಾತುಗಳು ಎಲ್ಲ ಕಡೆಗೂ ಸಲ್ಲುತ್ತವೆ. ಬಂದಿರಾ, ಬನ್ನಿ ಕುಶಲವಾಗಿದ್ದೀರಾ? ಎಂದು ವಿಚಾರಿಸಿದರೆ ನಮ್ಮ ಗಂಟೇನು ಹೋಗುವುದಿಲ್ಲ. ಆದರೆ ಶಿವನು ಅಂಥ ನುಡಿಗಳನ್ನು ತುಂಬ ಮೆಚ್ಚಿಕೊಳ್ಳುತ್ತಾನೆ ಎಂದು ಬಸವಣ್ಣನವರು ಹೇಳುತ್ತಾರೆ. ಕೂಡಲಸಂಗನ ಶರಣರ ಬಾಯಿಂದ ಬರುವ ಇಂಥ ನಲ್ನುಡಿಗಳು ಹಾಲ ತೊರೆಗೆ ಬೆಲ್ಲದ ಕೆಸರು, ಸಕ್ಕರೆಯ ಮಳಲು ರುಚಿಕರವಾದ ನೊರೆಯಿದ್ದಂತೆ ಎಂದು ಉಪಮಿಸಿ ನುಡಿದಿದ್ದಾರೆ. 'ಶರಣರ ಸೂಳ್ನುಡಿಯ ಒಂದರಗಳಿಗೆ ಇತ್ತಡೆ ನಿಮ್ಮನೇ ಇತ್ತೆ' ಎಂದು ಜೇಡರ ದಾಸಿಮಯ್ಯ ಹೇಳಿದರೆ, 'ಗೀತ ಮಾತೆಂಬ ಜ್ಯೋತಿಯ ಬೆಳಗಿಕೊಟ್ಟರು ಕೂಡಲ ಚೆನ್ನಸಂಗನ ಶರಣರು' ಎಂದು ಚೆನ್ನಬಸವಣ್ಣನವರು ಹೇಳಿದ್ದಾರೆ.

ಮಾತಿನ ಮಹತ್ವ ಕುರಿತು ಶರಣರು ತುಂಬ ಚಿಂತನೆ ಮಾಡಿದ್ದಾರೆ. ಮಾತು ಬಲ್ಲಾತಂಗೆ ಮಥನದ ಹಂಗೇಕೆ? ಎಂದು ಕೇಳಿದ ಹಡಪದ ಅಪ್ಪಣ್ಣನವರು ಚೆನ್ನಾಗಿ ಮಾತು ಬಲ್ಲವನ ಸಮೀಪ ಘರ್ಷಣೆ, ಜಗಳ, ಕಲಹ ಸುಳಿಯಲಾರವು ಎಂದು ಹೇಳಿದ್ದಾರೆ. 'ನುಡಿದ ನುಡಿಯೆಲ್ಲವು ಮಹಾಪ್ರಸಂಗವಾದ ಮತ್ತೆ ಲೆಕ್ಕವಿಲ್ಲದ ವೇದ ಸಂಖ್ಯೆ ಇಲ್ಲದ ಶಾಸ್ತ್ರ ನಡು ಮೊದಲಿಲ್ಲದ ಪುರಾಣವನೋದಲೇತಕ್ಕೆ?' ನುಡಿದ ಸತ್ಯವೆಲ್ಲವು ಸತ್ಯಶುದ್ಧವಾಗಿದ್ದರೆ, ನುಡಿದ ನುಡಿ ನಡೆಯಲಿ ಪೂರೈಸಿದರೆ ಯಾವ ಶಾಸ್ತ್ರ ಪುರಾಣಗಳನ್ನು ಓದಬೇಕಾಗಿಲ್ಲವೆಂದು ಶರಣೆ ಮೋಳಿಗೆಯ ಮಹಾದೇವಿ ಮಾರ್ಮಿಕವಾಗಿ ಹೇಳಿದ್ದಾಳೆ. ಮಾತಿನ ಪಸರದ ವ್ಯವಹಾರದೊಳಗೆ ಸಿಕ್ಕಿ ನೂಕು ತಾಕುಗೊಳುತ್ತಿರ್ಪವಂಗೆ ಮಹದ ಮಾತೇಕೆ? ಅಂಥ ಭೂಭಾರಕರಿಗೆ ಮುಕ್ತಿ ಎಂದೂ ದೊರಕದೆಂದು ಸ್ವತಂತ್ರ ಸಿದ್ಧಲಿಂಗೇಶ್ವರ ಶರಣರು ಹೇಳಿದ್ದಾರೆ. ಮಾತು ಮಾತಿನ ತೂತು ಜ್ಞಾನಿಗಳಿಗೆತ್ತಣ ಶರಣ ಸ್ಥಲವಯ್ಯಾ ಎಂದು ಶರಣ ದೇಶಿಕೇಂದ್ರ ಸಂಗನಬಸವಯ್ಯನವರು ವ್ಯಂಗ್ಯವಾಡಿದ್ದಾರೆ.

**ಭಕ್ತಿ ಪರಿಭಾಷೆಯ ನುಡಿಯ ನುಡಿವೆ, ನುಡಿದಂತೆ ನಡೆವೆ**
**ನುಡಿಯೊಳಗೆ ನಡೆಯ ಪೂರೈಸುವೆ**
**ಮೇಲೆ ತೂಗುವ ತ್ರಾಸು ಕಟ್ಟಳೆ ನಿಮ್ಮ ಕೈಯಲ್ಲಿ**
**ಒಂದು ಜವೆ ಕೊರತೆಯಾದಡೆ**
**ಎನ್ನನದ್ದಿ ನೀನೆದ್ದು ಹೋಗು ಕೂಡಲಸಂಗಮದೇವಾ.**

ನುಡಿವುದು, ಒಂದೆಡೆಯಾದರೆ; ನುಡಿದಂತೆ ನಡವುದೂ ಅಷ್ಟೇ ಮುಖ್ಯವಾದುದು. ನುಡಿದಂತೆ ನಡೆ ಇದೆ ಜನ್ಮ ಕಡೆ ಎಂಬ ನಾಣ್ನುಡಿಯೊಂದಿದೆ. ಭಕ್ತಿ ಸುಭಾಷೆಯ ನುಡಿಯ ನುಡಿವೆ, ನುಡಿದಂತೆ ನಡೆವೆ. ಅದನ್ನು ತೂಗಿ ನೋಡುವ ತಕ್ಕಡಿ ನಿನ್ನ ಕೈಯಲ್ಲಿದೆ. ನನ್ನ ನಡೆಯಲ್ಲಿ ಒಂದು ಜವೆ ಕೊರತೆಯಾದಡೂ ನನ್ನನದ್ದಿ ನೀನೆದ್ದು ಹೋಗು ಎಂದು ಬಸವಣ್ಣನವರು ದೇವರಿಗೆ ಸವಾಲೆಸೆಯುವ ರೀತಿಯಲ್ಲಿ ಹೇಳುತ್ತಾರೆ. ತಮ್ಮ ನಡೆಯಲ್ಲಿ ಅಷ್ಟು ಆತ್ಮವಿಶ್ವಾಸ ಅವರಿಗಿತ್ತು. ನುಡಿಯಲ್ಲಿ ಎಚ್ಚತ್ತು ನಡೆಯಲ್ಲಿ ತಪ್ಪಿದರೆ ಹಿಡಿದಿರ್ದ ಲಿಂಗ ಘಟಸರ್ಪವಯ್ಯಾ,

* # ೬೪೪, ರಾಮತೀರ್ಥನಗರ, ಬೆಳಗಾವಿ





ನುಡಿಗೆ ತಕ್ಕ ನಡೆ ಇಲ್ಲದ ಜಾತಿ ಡೊಂಬರ ನೋಡಿ ನಗುವನಯ್ಯಾ ಕೂಡಲ ಸಂಗಮದೇವಾ ಎಂದು ಹೇಳುತ್ತಾ ನುಡಿಯೊಂದಿಗೆ ನಡೆಯ ಮಹತ್ವವನ್ನು ತಿಳಿಸಿದ್ದಾರೆ. ನುಡಿದಂತೆ ನಡೆಯದೆ ಮಂಡೆ ಬೋಳಿಸಿಕೊಂಡು ಮೆರೆಯುವ ವೇಷ ಡಂಭಕರನ್ನು ಚೆನ್ನಬಸವಣ್ಣನವರು ತೀವ್ರವಾಗಿ ಹಳಿದಿದ್ದಾರೆ.

**ನುಡಿಯಲಿ ಜಾಣನಲ್ಲದೆ ನಡೆಯಲ್ಲಿ ಜಾಣನಲ್ಲದ**
**ಯುಕ್ತಿ ಶೂನ್ಯಂಗೆ ಸಕಳೇಶ್ವರದೇವ**
**ಒಲಿ ಒಲಿ ಎಂದರೆ ಎಂತೊಲಿವನಯ್ಯಾ.**

ನುಡಿಯಂತೆ ನಡೆ ಇಲ್ಲದ ಕಪಟಿಗಳಿಗೆ ದೇವರು ಒಲಿಯನೆಂದು ಸಕಳೇಶ ಮಾದರಸ ಶರಣರು ಹೇಳಿದ್ದಾರೆ. ಮಾತಿನಲ್ಲಿ ಮಹತ್ವ ನುಡಿದು ನೀತಿಯಲ್ಲಿ ಅಧಮರಾದ ಕೀಳು ಮನುಜರು ಎಷ್ಟು ಶಿವಧ್ಯಾನ ಮಾಡಿದರೂ ಬೆಟ್ಟಕ್ಕೆ ನಾಯಿ ಬೊಗಳಿದಂತೆ ನಿರರ್ಥಕವೆಂದು ತೋಂಟದ ಸಿದ್ಧಲಿಂಗ ಯತಿಗಳು ನುಡಿದಿದ್ದಾರೆ. ನೀತಿಯಲ್ಲಿ ಅಧಮರಾಗಿ ಮಾತಿನಲ್ಲಿ ಬೊಮ್ಮವ ನುಡಿವ ಬ್ರಹ್ಮೇತಿಕಾರರ ಮೆಚ್ಚ 'ನಿಃಕಳಂಕ ಮಲ್ಲಿಕಾರ್ಜುನಾ' ನಡೆನುಡಿ ಏಕವಾಗಿರಬೇಕೆಂದು ಮೋಳಿಗೆಯ ಮಾರಯ್ಯ ಶರಣರು ಒತ್ತಿ ಹೇಳಿದ್ದಾರೆ.

ಕಡುದರ್ಪವೇರಿದ ಒಡಲೆಂಬ ಬಂಡಿಗೆ ಮೃಢ ಶರಣರ ನುಡಿಗಡಣವೇ ಕಡೆಗೀಲು ಕಾಣಾ ರಾಮನಾಥಾ ಎಂದು ಜೇಡರ ದಾಸಿಮಯ್ಯ ಹೇಳಿದರೆ, ಅನಂತಕಾಲ ತಪವ ಮಾಡುವುದರಿಂದ ಒಂದು ನಿಮ್ಮ ಶರಣರ ಅನುಭಾವ ಸಾಲದೆ ಎಂದಿದ್ದಾರೆ ಬಸವಣ್ಣನವರು. ಆನೇನು ಬೇಡೆನು ಸಕಳೇಶ್ವರದೇವಾ ನಿಮ್ಮ ಶರಣರ ಸಂಗವುಳ್ಳಡೆ ಸಾಕು ಎಂದಿದ್ದಾರೆ ಸಕಳೇಶ ಮಾದರಸರು. ಚೆನ್ನಮಲ್ಲಿಕಾರ್ಜುನಾ ನೀ ಕೊಟ್ಟ ಆಯುಷ್ಯವುಳ್ಳನ್ನಕ್ಕರ ಲಿಂಗ ಸುಖಿಗಳ ಸಂಗದಲ್ಲಿ ದಿನಂಗಳಗಳೆವೆನು ಎಂದು ಅಕ್ಕ ಹೇಳಿದ್ದಾಳೆ. ಹೀಗೆ ಶರಣರ ಆಡುಂಬೊಲದಲ್ಲಿ ಅನುಭಾವದಲ್ಲಿ ಇದ್ದು; ನಮ್ಮ ಜೀವನವನ್ನು ಸಾರ್ಥಕಗೊಳಿಸಬೇಕೆಂದು ಅನೇಕ ಶರಣರು ಹೇಳಿದ್ದಾರೆ. ಮುತ್ತಿನ ಹಾರದಂತಿರುವ ಮಾಣಿಕ್ಯದ ದೀಪ್ತಿಯಂತಿರುವ ಸ್ಫಟಿಕದ ಸಲಾಕೆಯಂತಿರುವ ಜ್ಯೋತಿರ್ಲಿಂಗ ಸ್ವರೂಪವೇ ಆಗಿರುವ ಬಸವಾದಿ ಶರಣರ ನುಡಿ ಮುತ್ತುಗಳು ನಮಗೆ ದಾರಿದೀಪಗಳು. ಅವರ ನಡೆಯೇ ನಮಗೆ ಮಾರ್ಗ ದರ್ಶಕವು. ಅವರು ನುಡಿದು ನಡೆದ ದಾರಿಯಲ್ಲಿ ಸಾಗಿದರೆ ನಮ್ಮ ಜೀವನ ಸಫಲವಾಗುವುದರಲ್ಲಿ ಸಂಶಯವಿಲ್ಲ.







ಪ್ರಾತಃಸ್ಮರಣೀಯರು

# ವಿದ್ಯಾವಾಚಸ್ಪತಿ, ವಿದ್ಯಾಭಾಸ್ಕರ, ನ್ಯಾಯಮೂರ್ತಿ ಟಿ.ಎನ್. ಮಲ್ಲಪ್ಪನವರು

- ಎಚ್.ಎಸ್. ಸಿದ್ಧಗಂಗಪ್ಪ *

ವೃತ್ತಿಯಲ್ಲಿ ನ್ಯಾಯಮೂರ್ತಿಗಳಾಗಿ, ಪ್ರವೃತ್ತಿಯಲ್ಲಿ ಸಾಹಿತಿಗಳಾಗಿ, ಬಸವಾದಿ ಶರಣರ ಆದರ್ಶಗಳನ್ನು ಜೀವನದುದ್ದಕ್ಕೂ ಅಳವಡಿಸಿಕೊಂಡು ಮಾನವೀಯ ಮೌಲ್ಯಗಳ ಪ್ರತಿಪಾದಕರಾಗಿದ್ದ ನ್ಯಾಯಮೂರ್ತಿ ಟಿ.ಎನ್. ಮಲ್ಲಪ್ಪನವರು ಇಂಗ್ಲೀಷ್, ಕನ್ನಡ, ಸಂಸ್ಕೃತ ಭಾಷೆಗಳಲ್ಲಿ ಪ್ರಭುತ್ವವನ್ನು ಪಡೆದಿದ್ದರು. ಅವರು ವೀರಶೈವ ಉಗಮ ಮತ್ತು ಪ್ರಗತಿ, ವಚನೋಪನಿಷತ್ತು, ಪುರುಷ ಸೂಕ್ತ ಕೃತಿಗಳೂ ಸೇರಿದಂತೆ ಹನ್ನೆರಡಕ್ಕೂ ಹೆಚ್ಚು ಮೌಲಿಕ ಗ್ರಂಥಗಳನ್ನು ನೀಡುವುದರ ಮೂಲಕ ಸಾಹಿತ್ಯ ಕ್ಷೇತ್ರವನ್ನು ಶ್ರೀಮಂತಗೊಳಿಸಿದ್ದರು. ಅವರು ನ್ಯಾಯಾಲಯದಲ್ಲಿ ಕೊಡುತ್ತಿದ್ದ ತೀರ್ಪುಗಳು ನ್ಯಾಯಾಂಗ ಇಲಾಖೆಯಲ್ಲಿ ಮಹತ್ವಪೂರ್ಣಗಳಾಗಿದ್ದವು.

ಸರಳತೆ, ಸಜ್ಜನಿಕೆ, ಹೃದಯ ವೈಶ್ಯಾಲತೆ, ಅಂತರಂಗ ಶುದ್ಧಿ, ಬಹಿರಂಗ ಶುದ್ಧಿ, ವೃತ್ತಿಯಲ್ಲಿ ನಿಷ್ಠೆ, ಶ್ರದ್ಧೆ, ಬಡವರ ಬಗ್ಗೆ ಕಳಕಳಿ, ಅನುಕಂಪ, ಉದಾರತೆ, ಪರೋಪಕಾರ, ನಡೆ ನುಡಿಯಲ್ಲಿ ಏಕತಾನತೆ, ಗುರು ಹಿರಿಯರಲ್ಲಿ ಭಕ್ತಿ ಇವೆಲ್ಲ ಗುಣಗಳ ಮಹಾಸಂಗಮದಂತಿದ್ದರು ಟಿ.ಎನ್. ಮಲ್ಲಪ್ಪನವರು.

**ಜನನ :** ಹುಟ್ಟಿದ ವರ್ಷ ೧೮೯೬. ಹುಟ್ಟಿದ ಊರು ತುಮಕೂರು. ಶರಣ ದಂಪತಿಗಳಾದ ನಂಬಿಯಣ್ಣ ಮತ್ತು ಶ್ರೀಮತಿ ಗೌರಮ್ಮ ಅವರ ಪುತ್ರರತ್ನರು. ತಂದೆ ತಾಯಿಗಳು ಪ್ರೀತಿಯಿಂದ ಇಟ್ಟ ಹೆಸರು ಮಲ್ಲಪ್ಪ. ಇವರ ತಾತ ಚನ್ನಪ್ಪನವರು ದೈವಭಕ್ತರಾಗಿದ್ದು ಜಂಗಮ ದಾಸೋಹಿಗಳಾಗಿ ವಿವಿಧ ಕಲಾ ಪ್ರಕಾರಗಳಲ್ಲಿ ಪರಿಣತಿಯನ್ನು ಪಡೆದಿದ್ದ ಘನವಿದ್ವಾಂಸರಾಗಿದ್ದರು. ಇವರ ಮಗ ನಂಬಿಯಣ್ಣನವರೂ ತಂದೆಯಂತೆ ಸದ್ಗುಣಗಳ ಮೊತ್ತವಾಗಿದ್ದರು. ನಂಬಿಯಣ್ಣನವರು ಕವಿ ಷಡಕ್ಷರ ದೇವನ 'ರಾಜಶೇಖರ ವಿಲಾಸ'ವನ್ನು ತಪ್ಪಿಲ್ಲದಂತೆ ಓದಿ, ಸರಳವಾಗಿ ವ್ಯಾಖ್ಯಾನ ಮಾಡುವ ಕಲೆಯನ್ನು ರೂಢಿಸಿಕೊಂಡಿದ್ದರು. ಇಂತಹ ಸುಸಂಸ್ಕೃತ ವಾತಾವರಣದಲ್ಲಿ ಬೆಳೆದವರು ಟಿ.ಎನ್. ಮಲ್ಲಪ್ಪನವರಿಗೆ ಸಹಜವಾಗಿಯೇ ತಾತ, ತಂದೆಯವರ ಗುಣ ಅವರಲ್ಲಿ ಅಂತರ್ಗತವಾಗಿತ್ತು.

**ಶಿಕ್ಷಣ :** ತಂದೆ ನಂಬಿಯಣ್ಣನವರು ವ್ಯಾಪಾರದ ನಿಮಿತ್ತವಾಗಿ ಕೆಲವು ಕಾಲ ಮಾಗಡಿಯಲ್ಲಿ ನೆಲಸಬೇಕಾಯಿತು. ಹಾಗಾಗಿ ಪ್ರಾಥಮಿಕ ಹಾಗೂ ಮಾಧ್ಯಮಿಕ ಶಿಕ್ಷಣವನ್ನು ಮಾಗಡಿಯಲ್ಲಿಯೇ ನಡೆಯಿತು. ಬಾಲಕ ಮಲ್ಲಪ್ಪನವರದು ಅತ್ಯಂತ ಚುರುಕು ಬುದ್ಧಿ, ಓದುವುದರಲ್ಲಿ ತುಂಬಾ ಆಸಕ್ತಿಯುಳ್ಳವರಾಗಿದ್ದು, ಶಾಲೆಯಲ್ಲಿ ಶಿಕ್ಷಕರ ಪ್ರೀತಿಪಾತ್ರನಾಗಿದ್ದರು. ಲೋಯರ್ ಸೆಕೆಂಡರಿ ಶಿಕ್ಷಣವನ್ನು ಮುಗಿಸಿದ ನಂತರ ಪ್ರೌಢಶಾಲೆ ಶಿಕ್ಷಣ ಪಡೆಯಲು ಮಾಗಡಿಯಲ್ಲಿ ಅವಕಾಶವಿರಲಿಲ್ಲ. ಮಗನ ವಿದ್ಯಾಭ್ಯಾಸಕ್ಕೆ ಅಡಚಣೆಯಾಗಬಾರದೆಂಬ ಉದ್ದೇಶದಿಂದ ತಮ್ಮ ವಾಸ್ತವ್ಯವನ್ನು ಬೆಂಗಳೂರಿಗೆ ಬದಲಾಯಿಸಿದರು.

ಬೆಂಗಳೂರಿನ ಫೋರ್ಟ್ ಹೈಸ್ಕೂಲಿನಲ್ಲಿ ಎಸ್.ಎಸ್.ಎಲ್.ಸಿ. ಶಿಕ್ಷಣವನ್ನು ಮುಗಿಸಿದ ನಂತರ ೧೯೧೯ ರಲ್ಲಿ ಸೆಂಟ್ರಲ್ ಕಾಲೇಜಿಗೆ ಸೇರಿ ಬಿ.ಎ. ಪದವಿಯನ್ನು ಪಡೆದರು. ಬಾಲ್ಯದಿಂದಲೂ ಪ್ರತಿಭಾವಂತ ವಿದ್ಯಾರ್ಥಿಯಾದುದರಿಂದ ವಿದ್ಯಾರ್ಥಿ ವೇತನ ಬರುತ್ತಿತ್ತು. ಹಾಗಾಗಿ ಶಿಕ್ಷಣಕ್ಕೆ ತೊಂದರೆಯಾಗಲಿಲ್ಲ. ಬಿ.ಎ. ಪದವಿ ಪಡೆದ ನಂತರ ಕಾನೂನು ಶಾಸ್ತ್ರವನ್ನು ಅಧ್ಯಯನ ಮಾಡಬೇಕೆಂಬ ಬಯಕೆಯಿದ್ದರೂ, ಬೆಂಗಳೂರಿನಲ್ಲಿ ಅವಕಾಶವಿರಲಿಲ್ಲ. ಮುಂಬಯಿಗೆ ಹೋಗಬೇಕಾಗಿತ್ತು. ಆದರೆ ವೆಚ್ಚ ಭರಿಸಲು ತಂದೆಯವರಿಗೆ ಸಾಧ್ಯವಾಗಲಿಲ್ಲ. ಇಂತಹ ಪರಿಸ್ಥಿತಿಯಲ್ಲಿ ದೇವರಂತೆ ನೆರವಿಗೆ ಬಂದವರು ಚಿತ್ರದುರ್ಗದ ಪೂಜ್ಯ ಶ್ರೀಗಳವರು. ಜೊತೆಗೆ ಎಂ.ಎಲ್.ಇ.ಎಫ್. ನಿಧಿಯಿಂದಲೂ ಆರ್ಥಿಕ ನೆರವು ದೊರೆತು ಎಲ್.ಎಲ್.ಬಿ. ಪದವಿಯನ್ನು ಪಡೆದು

---

* ೧೬೧೭, ಮಾತೃಶ್ರೀ, ಸರ್ ಎಂ.ವಿ. ಮುಂದುವರೆದ ಬಡಾವಣೆ, ೮ನೇ ಬ್ಲಾಕ್, ಸ್ಫೂರ್ತಿಧಾಮದ ಎದುರು, ಮುದ್ದಿನಪಾಳ್ಯ ಮುಖ್ಯರಸ್ತೆ, ಬೆಂಗಳೂರು-೯೧ ಮೊ: ೯೮೪೫೫ ೬೫೮೭೧

ತಮ್ಮ ಆಶಯವನ್ನು ಸಾಕಾರಗೊಳಿಸಿದರು. ೧೯೨೦-೨೨ ರಲ್ಲಿ ಬೆಂಗಳೂರಿಗೆ ಬಂದು ಆಗಿನ ಪ್ರಸಿದ್ಧ ವಕೀಲರೆಂಬ ಹೆಗ್ಗಳಿಕೆಗೆ ಪಾತ್ರರಾಗಿದ್ದ ಮೋಕ್ಷಗುಂಡಂ ಕೃಷ್ಣಮೂರ್ತಿ ಅವರಲ್ಲಿ ಜ್ಯೂನಿಯರ್ ಆಗಿ ವಕೀಲಿ ವೃತ್ತಿಯನ್ನು ಆರಂಭಿಸಿ, ವೃತ್ತಿಯಲ್ಲಿ ಪರಿಣತಿಯನ್ನು ಪಡೆದರು. ಎರಡು ವರ್ಷಗಳಲ್ಲಿ ಮ್ಯಾಜಿಸ್ಟ್ರೇಟ್ ಆಗಿ ಆಯ್ಕೆಯಾಗಿ ಶಿವಮೊಗ್ಗ ಜಿಲ್ಲೆಯ ಸಾಗರದಲ್ಲಿ ವೃತ್ತಿಜೀವನವನ್ನು ಆರಂಭಿಸಿದರು.

ಶ್ರೀ ಟಿ.ಎಸ್. ಮಲ್ಲಪ್ಪನವರು ನ್ಯಾಯಾಧೀಶ ಹುದ್ದೆಗಷ್ಟೇ ತಮ್ಮ ಬದುಕನ್ನು ಸೀಮಿತಗೊಳಿಸಲಿಲ್ಲ. ಸಮಯ ದೊರೆತಾಗಲೆಲ್ಲ ಕಾಲವನ್ನು ಸದುಪಯೋಗ ಪಡಿಸಿಕೊಂಡು ಕಾವ್ಯ ವಾಚನ, ಕಾವ್ಯ ರಚನೆ, ನಾಟಕ, ಚಿತ್ರ ರಚನೆಗಳಲ್ಲಿ ತೊಡಗಿಸಿಕೊಂಡರು. ಸದಾ ಒಂದಲ್ಲ ಒಂದು ಚಟುವಟಿಕೆಗಳಲ್ಲಿ ತೊಡಗುತ್ತಿದ್ದ ಕ್ರಿಯಾಶೀಲ ವ್ಯಕ್ತಿತ್ವ ಅವರದಾಗಿತ್ತು.

ಗುರುಗಳ ನೆರವಿಲ್ಲದೆಯೇ ಸ್ವಪ್ರಯತ್ನದಿಂದ ಮನೆಯಲ್ಲಿ ಕುಳಿತು ಸಂಸ್ಕೃತವನ್ನು ಕಲಿತು, ಆ ಭಾಷೆಯಲ್ಲಿ ಪ್ರಭುತ್ವವನ್ನು ಪಡೆದರು. ಸಂಸ್ಕೃತ ವಿದ್ವಾಂಸರ ನಿಕಟ ಸಂಪರ್ಕವಿಟ್ಟುಕೊಂಡಿದ್ದರು. ಅವರೆಲ್ಲರ ಸಹಕಾರ, ಮಾರ್ಗದರ್ಶನದಿಂದ ಸಂಸ್ಕೃತದಲ್ಲಿ ಹಲವಾರು ಮೌಲಿಕ ಗ್ರಂಥಗಳನ್ನು ರಚಿಸಿ ಲೋಕಾರ್ಪಣೆ ಮಾಡಿದರು.

ಬಹುಮುಖ ಪ್ರತಿಭಾವಂತರಾಗಿದ್ದ ಶ್ರೀ ಮಲ್ಲಪ್ಪನವರು ಸೀಸದ ಕಡ್ಡಿಯಿಂದ ರೇಖಾಚಿತ್ರ ಬಿಡಿಸುವುದರಲ್ಲಿ ಸಿದ್ಧಹಸ್ತರಾಗಿದ್ದರು. ೧೯೨೦ ರಲ್ಲಿ ಸೀಸದ ಕಡ್ಡಿಯಿಂದ ರಚಿಸಿದ ಮೈಸೂರಿನ ಕೃಷ್ಣರಾಜ ಒಡೆಯರ್ ಅವರ ಚಿತ್ರ ತುಂಬಾ ಸಹಜ ಸುಂದರವಾಗಿ ಮೂಡಿಬಂದಿದ್ದು; ಇಂದಿಗೂ ಅದು ಅವರ ಮನೆಯ ಹಾಲ್‌ನ ಗೋಡೆಯಲ್ಲಿ ಉನ್ನತ ಸ್ಥಾನ ಪಡೆದುಕೊಂಡಿದೆ.

ಸೋಮಾರಿತನವನ್ನು ಶ್ರೀ ಟಿ.ಎಸ್. ಮಲ್ಲಪ್ಪನವರು ದ್ವೇಷಿಸುತ್ತಿದ್ದರು. ತಮ್ಮ ಜೀವಿತದ ಕೊನೆ ಘಳಿಗೆಯ ವರೆಗೂ ಸೋಮಾರಿತನವನ್ನು ಹತ್ತಿರ ಸುಳಿಯಲು ಬಿಡಲಿಲ್ಲ. ನಿರಂತರ ಅಧ್ಯಯನ ಅವರ ಜೀವನದ ಅವಿಭಾಜ್ಯ ಅಂಗವಾಗಿತ್ತು. ಕೊನೆಯವರೆಗೂ ವಿದ್ಯಾರ್ಥಿಯಾಗಿಯೇ ಇದ್ದರು. ಅವರಿಗೆ ಜ್ಞಾನದ ಹಸಿವು ತೀವ್ರವಾಗಿತ್ತು. ಎಷ್ಟು ಓದಿದರೂ ತೃಪ್ತಿಯಾಗುತ್ತಿರಲಿಲ್ಲ. ಅವರು ವಿದ್ವತ್ತಿನ ಗಣಿಯೇ ಆಗಿದ್ದರು. ಯಾವುದೇ ವಿಷಯವನ್ನು ಕುರಿತು ಬರೆಯುವಾಗ ಆಯಾ ವಿಷಯಗಳಿಗೆ ಸಂಬಂಧಿಸಿದಂತೆ ಬಂದಿರುವ ಕೃತಿಗಳ ತಲಸ್ಪರ್ಶಿ ಅಧ್ಯಯನ ಮಾಡಿ ಪೂರ್ವಾಗ್ರಪೀಡಿತರಾಗದೆ ಬರೆಯುತ್ತಿದ್ದರು. ಹಾಗಾಗಿ ಅವರು ಬರೆದ ಕೃತಿಗಳು ಮೌಲಿಕವಾಗಿವೆ.

**ಶಿಸ್ತುಬದ್ಧ ಜೀವನ :** ಶ್ರೀ ಟಿ.ಎಸ್. ಮಲ್ಲಪ್ಪನವರು ವಿದ್ಯಾರ್ಥಿದೆಸೆಯಿಂದಲೂ ಶಿಸ್ತಿಗೆ ಹೆಚ್ಚು ಗಮನ ಕೊಡುತ್ತಿದ್ದರು. ಆ ಶಿಸ್ತನ್ನು ಕೊನೆಯುವರೆಗೂ ಕಾಪಾಡಿಕೊಂಡು ಬಂದಿದ್ದರು. ಉಡುಗೆ ತೊಡುಗೆಗೆ ಹೆಚ್ಚು ಮಹತ್ವ ಕೊಡುತ್ತಿದ್ದರು. ಪ್ಯಾಂಟು, ಕೋಟು, ಅದಕ್ಕೆ ಹೊಂದುವ ಟೈ, ಜೊತೆಗೆ ಮೈಸೂರು ಪೇಟ ಧರಿಸುವುದರಲ್ಲಿ ಅಚ್ಚುಕಟ್ಟುತನ ಎದ್ದು ಕಾಣುತ್ತಿತ್ತು. ಮನೆಗೆ ಯಾರಾದರೂ ಅತಿಥಿ, ಅಭ್ಯಾಗತರು ಬಂದಾಗಲೂ ಇದೇ ಉಡುಪನ್ನು ಧರಿಸುತ್ತಿದ್ದರು. ಆರೋಗ್ಯದ ಬಗ್ಗೆ ಹೆಚ್ಚು ಗಮನಕೊಡುತ್ತಿದ್ದರು. ಐವತ್ತರ ವಯಸ್ಸಿನಲ್ಲೂ ಟೆನ್ನಿಸ್ ಆಡುತ್ತಿದ್ದರು. ಅವರು ಕೋರ್ಟಿನಲ್ಲಿ 'very stick player' ಎಂಬ ಹೆಗ್ಗಳಿಕೆಗೆ ಪಾತ್ರರಾಗಿದ್ದರು.

**ಆದರ್ಶ ಕುಟುಂಬ :** ಎಲ್.ಎಲ್.ಬಿ. ಪದವಿ ಪಡೆದ ಮೇಲೆ ಗೃಹಸ್ಥ ಜೀವನಕ್ಕೆ ಪಾದಾರ್ಪಣೆ ಮಾಡಿದರು. ಕೈಹಿಡಿದ ಭಾಗ್ಯವಂತೆ ಶ್ರೀಮತಿ ಲಲಿತಮ್ಮನವರು. ಮನೆತುಂಬ ಮಕ್ಕಳು. ಕೀರ್ತಿಗೆ ಮೂರು ಜನ ಗಂಡುಮಕ್ಕಳು, ಆರುತಿಗೆ ನಾಲ್ಕು ಜನ ಹೆಣ್ಣು ಮಕ್ಕಳು. ಅವರ ಸಂಸಾರ ಹಾಲಿಗೆ ಜೇನು ಬೆರೆಸಿದಂತಿತ್ತು. ಮಕ್ಕಳೊಂದಿಗೆ ಪ್ರೀತಿ, ವಾತ್ಸಲ್ಯದಿಂದ ನಡೆದು ಕೊಳ್ಳುತ್ತಿದ್ದರು.

**ನ್ಯಾಯಾಧೀಶರಾಗಿ :** ನ್ಯಾಯಾಧೀಶರಾಗಿ ಅವರು ನೀಡಿದ ತೀರ್ಪುಗಳು ಬಹುಜನರ ಮೆಚ್ಚುಗೆಗೆ ಪಾತ್ರವಾಗಿತ್ತು. ಅವರು ನೀಡುವ ತೀರ್ಪಿನಲ್ಲಿ ಕರುಣೆಯಿತ್ತು, ಮಾನವೀಯತೆಯಿತ್ತು. ಅವರು ಯಾವುದೇ ಕೇಸನ್ನು ಬಹುದಿನಗಳವರೆಗೆ ಮುಂದುವರಿಸದೆ ಆದಷ್ಟು ಬೇಗ ತೀರ್ಪು ನೀಡಿ ಇತ್ಯರ್ಥ ಮಾಡುತ್ತಿದ್ದರು. ಬಹುತೇಕ ಕೇಸುಗಳನ್ನು ಪರಾಮರ್ಶಿಸುವಾಗ ಎರಡು ಕಡೆಯವರನ್ನು ಕರೆಸಿ ಅವರ ತಪ್ಪನ್ನು ಮನವರಿಕೆ ಮಾಡಿಕೊಟ್ಟು ರಾಜಿ ಮಾಡಿಸುತ್ತಿದ್ದರು. ಯಾವುದೇ ತೀರ್ಪನ್ನು ನೀಡುವಾಗ ತುಂಬಾ ಎಚ್ಚರಿಕೆಯಿಂದ ಕಕ್ಷಿದಾರರಿಗೆ ಅನ್ಯಾಯವಾಗದಂತೆ ತೀರ್ಪು ನೀಡುತ್ತಿದ್ದರು. ಕಾನೂನು ಇರುವುದು ಸಮಾಜದ ಕಲ್ಯಾಣಕ್ಕಾಗಿಯೇ ಹೊರತು ಹಿಂಸೆ ಕೊಡುವುದಕ್ಕಲ್ಲ; ಎಂದು ಭಾವಿಸಿ ಅದರಂತೆ ತೀರ್ಪು ನೀಡುತ್ತಿದ್ದರು.



ಶ್ರೀ ಮಲ್ಲಪ್ಪನವರು ಗಂಭೀರ ಸ್ವಭಾವದವರಾಗಿದ್ದಂತೆ ಹಾಸ್ಯ ಪ್ರಿಯರೂ ಆಗಿದ್ದರು. ಕೋರ್ಟಿನಲ್ಲಿ ಹಾಸ್ಯಚಟಾಕಿ ಹಾರಿಸುವುದರ ಮೂಲಕ ಇಡೀ ಕೋರ್ಟ್ ಹಾಲನ್ನು ನಗೆಗಡಲಿನಲ್ಲಿ ಮುಳುಗುವಂತೆ ಮಾಡುತ್ತಿದ್ದರು. ಹಾಗಾಗಿ ಅವರ ಕೋರ್ಟ್ ಹಾಲ್ ಸದಾ ತುಂಬಿರುತ್ತಿತ್ತು.

ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿ ಅನೇಕ ರಾಜಕೀಯ ವ್ಯಕ್ತಿಗಳ ಮೇಲೆ ಮೊಕದ್ದಮೆಗಳನ್ನು ಹಾಕಲಾಯಿತು. ಆ ಸಂದರ್ಭದಲ್ಲಿ ಸೆರೆಮನೆಯ ವಾಸ ಅಥವಾ ಇನ್ನಾವುದೇ ರೀತಿಯ ದಂಡ ಹಾಕಿದರೆ ಅಂತಹವರ ರಾಜಕೀಯ ಜೀವನಕ್ಕೆ ಇತಿಶ್ರೀ ಹಾಡ ಬೇಕಾಗಿತ್ತು. ಇಂತಹ ಸಂದರ್ಭದಲ್ಲಿ ಕೆಂಗಲ್ ಹನುಮಂತಯ್ಯನವರ ವಿರುದ್ಧ ಹಾಕಿದ್ದ ಮೊಕದ್ದಮೆಯೊಂದು ಶ್ರೀ ಮಲ್ಲಪ್ಪನವರ ಮುಂದೆ ಬಂದಿತ್ತು. ಆ ಸಂದರ್ಭದಲ್ಲಿ ಪೂರ್ವಾಪರ ಯೋಚನೆ ಮಾಡಿ, ದೂರ ದೃಷ್ಟಿಯಿಂದ ಅವರ ಭವಿಷ್ಯವನ್ನು ಗಮನದಲ್ಲಿಟ್ಟುಕೊಂಡು ಅವರಿಗೆ ಯಾವುದೇ ರೀತಿಯ ಸಜೆಯನ್ನು ವಿಧಿಸಲಿಲ್ಲ. ಒಂದು ವೇಳೆ ಅವರಿಗೆ ಕಾರಾಗೃಹ ಶಿಕ್ಷೆ ವಿಧಿಸಿದ್ದರೆ ಅವರು ಕರ್ನಾಟಕದ ಮುಖ್ಯಮಂತ್ರಿಯಾಗುತ್ತಿರಲಿಲ್ಲ. ವಿಧಾನ ಸೌಧದ ನಿರ್ಮಾಣದ ಕನಸು ಸಾಕಾರವಾಗುತ್ತಿರಲಿಲ್ಲ.

**ಮಾನವೀಯತೆ :** ಶ್ರೀ ಟಿ.ಎಸ್. ಮಲ್ಲಪ್ಪನವರು ಮನುಷ್ಯತ್ವವುಳ್ಳ ಹೃದಯವಂತ ವ್ಯಕ್ತಿಯಾಗಿದ್ದರು ಎಂಬುದಕ್ಕೆ ಅವರ ಜೀವನದಲ್ಲಿ ನಡೆದ ಅನೇಕ ನಿದರ್ಶನಗಳಿವೆ. ಇಲ್ಲಿ ಸಾಂಕೇತಿಕವಾಗಿ ಎರಡು ಘಟನೆಗಳನ್ನು ಉಲ್ಲೇಖಿಸ ಬಯಸುತ್ತೇನೆ. ಹೊಳೆನರಸೀಪುರದಲ್ಲಿ ಮಲ್ಲಪ್ಪನವರು ನ್ಯಾಯಾಧೀಶರಾಗಿದ್ದಾಗ ವೀರಪ್ಪ ಎಂಬ ವಕೀಲರು ಒಳ್ಳೆಯ ವಕೀಲರೆಂಬ ಹೆಸರು ಮಾಡಿದ್ದರು. ಆರ್ಥಿಕವಾಗಿ ಸಬಲರಾಗಿದ್ದರು. ಅವರಿಗೆ ಇದ್ದಕ್ಕಿದ್ದಂತೆ ಲಕ್ವ ಹೊಡೆದು ಆಸ್ಪತ್ರೆಗೆ ಸೇರಿದರು. ಅವರೆಗೆ ಗಳಿಸಿ ಕೂಡಿಟ್ಟ ಹಣವೆಲ್ಲ ನೀರಿನಂತೆ ಖರ್ಚಾಯಿತು. ಹಣಕ್ಕಾಗಿ ಪರದಾಡುವ ಪರಿಸ್ಥಿತಿ ಉಂಟಾಯಿತು. ಈ ವಿಚಾರವನ್ನು ತಿಳಿದ ಮಲ್ಲಪ್ಪನವರು ಆಸ್ಪತ್ರೆಗೆ ಹೋಗಿ ಆರೋಗ್ಯ ವಿಚಾರಿಸಿ; ಹಣ ಸಹಾಯ ಮಾಡಿದರು. ಸಹಾಯ ಮಾಡಿದ ವಿಚಾರವನ್ನು ಯಾರಿಗೂ ಹೇಳಬಾರದೆಂದು ವೀರಪ್ಪನವರಿಂದ ವಚನ ತೆಗೆದುಕೊಂಡರು.

**ಮತ್ತೊಂದು ಘಟನೆ :** ಒಂದು ದಿನ ಮುಂಜಾನೆ ವಾಯು ವಿಹಾರಕ್ಕೆ ಹೋಗುತ್ತಿದ್ದಾಗ ಬೆಲೆ ಬಾಳುವ ಕಾರಿನಲ್ಲಿ ಒಬ್ಬ ವ್ಯಕ್ತಿ ಅವರನ್ನು ಹಿಂಬಾಲಿಸುತ್ತಿದ್ದುದನ್ನು ಗಮನಿಸಿದ ಮಲ್ಲಪ್ಪನವರು ತಮ್ಮ ಪಾಡಿಗೆ ವಾಯು ವಿಹಾರ ಮುಗಿಸಿ ಮನೆಗೆ ಹೋದರು. ಆ ವ್ಯಕ್ತಿ ಮನೆಗೆ ಹೋಗಿ ಅವರ ಕಾಲಿಗೆ ದೀರ್ಘದಂಡ ನಮಸ್ಕಾರ ಮಾಡಿದಾಗ ಮಲ್ಲಪ್ಪನವರಿಗೆ ಆಶ್ಚರ್ಯವಾಯಿತು. ಆ ವ್ಯಕ್ತಿ ತನ್ನ ಪರಿಚಯವನ್ನು ಹೇಳಿಕೊಂಡ. ಹೊಳೆನರಸೀಪುರದಲ್ಲಿ ನ್ಯಾಯಾಧೀಶರಾಗಿದ್ದಾಗ ತುಂಡು ಪಂಚೆ ಉಡುತ್ತಿದ್ದ ಹುಡುಗ. ಈತ ಬ್ರಾಹ್ಮಣ ಹುಡುಗ. ಬೀದಿಯಲ್ಲಿ ಅಲೆದಾಡುತ್ತಿದ್ದುದನ್ನು ಗಮನಿಸಿದ ಮಲ್ಲಪ್ಪನವರು ಮನೆಗೆ ಕರೆದುಕೊಂಡು ಬಂದು ಆತನ ಬಗ್ಗೆ ವಿಚಾರಿಸಿದಾಗ, ಅವನೊಬ್ಬ ಅನಾಥ. ಆದರೆ ಅವನು ಚುರುಕುಮತಿಯವನಾಗಿದ್ದ. ಇದನ್ನು ಗಮನಿಸಿದ ಮಲ್ಲಪ್ಪನವರು ಈತನ ಭವಿಷ್ಯ ಹಾಳಾಗಬಾರದೆಂದು ನಿಶ್ಚಯಿಸಿ ತಾವೇ ಅವನಿಗೆ ವಾರಾನ್ನದ ವ್ಯವಸ್ಥೆ ಮಾಡಿದ್ದರು. ಅವನಿಗೆ ಶಾಲಾ ಫೀಸ್ ಕಟ್ಟಿ, ಬಟ್ಟೆಗಳನ್ನು ಕೊಡಿಸಿ ವಿದ್ಯಾಭ್ಯಾಸಕ್ಕೆ ಅನುಕೂಲ ಮಾಡಿಕೊಟ್ಟಿದ್ದರು. ಅವರ ಮುಂದೆ ವಿನೀತನಾಗಿ ನಿಂತ ಆ ಹುಡುಗ ಉನ್ನತ ಹುದ್ದೆಯಲ್ಲಿದ್ದಾನೆ. ಅವನ ಮಕ್ಕಳೆಲ್ಲ ವಿದೇಶಗಳಲ್ಲಿ ದೊಡ್ಡ ದೊಡ್ಡ ನೌಕರಿಯಲ್ಲಿದ್ದಾರೆ. ಆ ಸಂದರ್ಭದಲ್ಲಿ ಅವನ ಹೃದಯಾಳದಿಂದ ಬಂದ ಮಾತುಗಳು "ಸರ್ ಅಂದು ನೀವು ನನಗೆ ಸಹಾಯ ಮಾಡದಿದ್ದರೆ ಇಂದು ನಾನು ಈ ಸ್ಥಿತಿಗೆ ಬರುತ್ತಿರಲಿಲ್ಲ. ನನ್ನ ಜೀವವಿರುವವರೆಗೂ ನಿಮ್ಮ ಸಹಾಯವನ್ನು ಮರೆಯಲಾರೆ, ಋಣಿಯಾಗಿರುತ್ತೇನೆ" ಎಂದು ಕೃತಜ್ಞತಾ ನುಡಿಗಳನ್ನು ಹೇಳುವಾಗ ಅವನಿಗರಿವಿಲ್ಲದೇ ಕಣ್ಣೀರ ಧಾರೆ ಸುರಿಯಿತು. ಆದರೆ ಮಲ್ಲಪ್ಪನವರಿಗೆ ಈ ಘಟನೆ ನೆನಪಿರಲಿಲ್ಲ. ಇಂಥ ಎಷ್ಟೋ ಜನರಿಗೆ ಸಹಾಯ ಮಾಡಿದವರಿಗೆ ಎಲ್ಲವನ್ನೂ ನೆನಪಿನಲ್ಲಿಟ್ಟುಕೊಳ್ಳಲು ಎಲ್ಲಿ ಸಾಧ್ಯ! ಬಲಗೈಯಲ್ಲಿ ಮಾಡಿದ ಸಹಾಯ ಎಡಗೈಗೆ ಗೊತ್ತಾಗಬಾರದೆಂಬ ವ್ಯಕ್ತಿತ್ವವನ್ನು ಬೆಳೆಸಿಕೊಂಡಿದ್ದರು. ಆಗ ಅವರ ಮನಸ್ಸಿನಿಂದ ಮೂಡಿಬಂದ ಭಾವನೆ "ಮಾಡಿದ ಸಹಾಯವನ್ನು ಜ್ಞಾಪಿಸಿಕೊಳ್ಳುವ ಕೃತಜ್ಞತೆಯುಳ್ಳ ವ್ಯಕ್ತಿಗಳು ಇದ್ದಾರಲ್ಲ" ಎಂದು ತಿಳಿದು ಸಂತೋಷಪಟ್ಟರು.

**ಸಾಹಿತ್ಯ ಕ್ಷೇತ್ರ :** ಶ್ರೀ ಮಲ್ಲಪ್ಪನವರು ತಮ್ಮ ಬಿಡುವಿನ ವೇಳೆಯನ್ನು ಅಧ್ಯಯನ, ಬರವಣಿಗೆಗೆ ಮೀಸಲಾಗಿಟ್ಟಿದ್ದರು. ಅಧ್ಯಯನ ಅವರಿಗೆ ನಿರಂತರ ತಪಸ್ಸಾಗಿತ್ತು. ಅವರು ವೈದಿಕ ಸಾಹಿತ್ಯ ಹಾಗೂ ವಚನ ಸಾಹಿತ್ಯವನ್ನು ಆಳವಾಗಿ ಅಧ್ಯಯನ ಮಾಡಿದ್ದರು. ಹೀಗಾಗಿ ಎರಡರಲ್ಲೂ ಸವ್ಯಸಾಚಿಗಳೆಂಬ ಹೆಗ್ಗಳಿಕೆಗೆ ಪಾತ್ರರಾಗಿದ್ದರು. ವೈದಿಕ ಸಾಹಿತ್ಯ ಮತ್ತು ವಚನ ಸಾಹಿತ್ಯದಲ್ಲಿ ಏಕಸೂತ್ರವಿದೆ ಎಂಬ





ನಿಲವನ್ನು ಹೊಂದಿದ್ದರು. ಅವರು ವಚನೋಪನಿಷತ್ತಿನಲ್ಲಿ ಭಾರತೀಯ ದರ್ಶನದ ಸಿಂಹಾವಲೋಕನ ಮಾಡಿದ್ದಾರೆ. ಆಧ್ಯಾತ್ಮದ ವಿಕಾಸವು ವೇದಗಳ ಕಾಲದಿಂದ ಆರಂಭವಾಗಿ ವಚನಕಾರರ ಕಾಲದವರೆಗೂ ಬೆಳೆದು ಬಂದುದನ್ನು ವಿವರಿಸಿದ್ದಾರೆ. ಈ ಗ್ರಂಥದಲ್ಲಿ ಅವರ ವಿದ್ವತ್ತಿನ ಆಳ-ವಿಸ್ತಾರಗಳನ್ನು ಗಮನಿಸಬಹುದಾಗಿದೆ. ಪೂರ್ವಾಗ್ರವಿಲ್ಲದ ವಿವೇಚನೆ ಮಾಡುವ ಅವರ ಕೌಶಲ್ಯವನ್ನು ಇಲ್ಲಿ ಕಾಣಬಹುದಾಗಿದೆ. ಅವರ ಲೇಖನಿಯಿಂದ ಮೂಡಿಬಂದ ಎಲ್ಲ ಗ್ರಂಥಗಳೂ ತಲಸ್ಪರ್ಶಿ ಅಧ್ಯಯನದಿಂದ ಬೆಳಕು ಕಂಡವುಗಳು. ಅವರ ಕೆಲವು ಗ್ರಂಥಗಳು ಹೀಗಿವೆ :

೧. ವೀರಶೈವ ಉಗಮ ಮತ್ತು ಪ್ರಗತಿ

೨. ಮುಂಡಕೋಪನಿಷತ್ ಪ್ರಕಾಶ

೩. ಈಶಾವಾಸ್ಯೋಪನಿಷತ್ಪ್ರಕಾಶ

೪. ಕಠೋಪನಿಷತ್ ಪ್ರಕಾಶ

೫. ಕೇನೋಪನಿಷತ್ ತಾತ್ಪರ್ಯ – ನಿರ್ಣಯ

೬. ವಚನೋಪನಿಷತ್ತು

೭. ಬ್ರಹ್ಮಸೂತ್ರ ದರ್ಶನ

೮. ಪುರುಷ ಸೂಕ್ತ

೯. ನಾಸದೀಯ ಸೂಕ್ತ

೧೦. ಕ್ರಿಯಾಶಕ್ತಿ ವಿದ್ಯಾರಣ್ಯ (ಇಂಗ್ಲೀಷ್) ಇತ್ಯಾದಿ.

ಶ್ರೀ ಮಲ್ಲಪ್ಪನವರು ಮೇಲೆ ತಿಳಿಸಿದ ಅಮೂಲ್ಯ ಗ್ರಂಥಗಳನ್ನು ರಚಿಸಿದುದರ ಜೊತೆಗೆ ಅಸಂಖ್ಯಾತ ಲೇಖನಗಳನ್ನು ಪ್ರಕಟಿಸಿ ತಮ್ಮ ಆಳವಾದ ವಿದ್ವತ್ತು ಪ್ರತಿಭೆಗಳನ್ನು ಮೆರೆದಿದ್ದಾರೆ. ಅವರ ಕೃತಿಗಳಲ್ಲಿ ಹಾಗೂ ಲೇಖನಗಳಲ್ಲಿ ಸಂಶೋಧನೆಯ ಹೊಳಪು ಕಾಣಿಸುತ್ತದೆ.

ಅವರು ೧೯೫೪ರಲ್ಲಿ ಸೇವೆಯಿಂದ ನಿವೃತ್ತಿ ಹೊಂದಿದರು. ಆ ವರ್ಷ ಅವರು ರಚಿಸಿದ ಈಶಾವಾಸ್ಯೋಪನಿಷತ್ಪ್ರಕಾಶ ಗ್ರಂಥ ಲೋಕಾರ್ಪಣೆಯಾಯಿತು. ಈ ಗ್ರಂಥ ಅವರ ಮೂವತ್ತು ವರ್ಷಗಳ ನಿರಂತರ ಅಧ್ಯಯನ, ಪರಿಶ್ರಮದ ಫಲ. ಈ ಗ್ರಂಥವನ್ನು ಅವಲೋಕಿಸಿ ಮೆಚ್ಚಿಕೊಂಡ ಚಿತ್ರದುರ್ಗ ಜಗದ್ಗುರುಗಳಾದ ಪೂಜ್ಯ ಶ್ರೀ ಶ್ರೀ ಮುರುಘರಾಜೇಂದ್ರ ಮಹಾಸ್ವಾಮಿಗಳವರು "ವೇದ ವೇದಾಂತ ವಿದ್ಯಾವಾಚಸ್ಪತಿ" ಎಂಬ ಬಿರುದನ್ನು ನೀಡಿ ಗೌರವಿಸಿದರು. ಶ್ರೀ ಶ್ರೀ ಶೈಲ ಜಗದ್ಗುರುಗಳು "ಮಲ್ಲಣ್ಣಭಾಪು" ಎಂದು ಮುಕ್ತಕಂಠದಿಂದ ಶ್ಲಾಘಿಸಿ ಆಶೀರ್ವದಿಸಿದುದು ಅವರ ವಿದ್ವತ್‌ಗೆ ಸಂದ ಗೌರವದ ದ್ಯೋತಕವಾಗಿದೆ.

"ವೀರಶೈವದ ಉಗಮ ಮತ್ತು ಪ್ರಗತಿ" ಮಲ್ಲಪ್ಪನವರಿಗೆ ಅಪಾರವಾದ ಕೀರ್ತಿಯನ್ನು ತಂದುಕೊಟ್ಟ ಮೌಲಿಕ ಕೃತಿ. ಈ ಕೃತಿಯನ್ನು ಓದಿ ಅರ್ಥಮಾಡಿಕೊಂಡರೆ ಎಂಥ ವಿದ್ವತ್ ಸಭೆಯಲ್ಲೂ ಶೈವ-ವೀರಶೈವ ಧರ್ಮದ ಬಗ್ಗೆ ಅಧಿಕೃತವಾಗಿ ಮಾತನಾಡಬಹುದು. ಈ ಕೃತಿಯ ಬಗ್ಗೆ ಲೇಖಕರೇ ಹೀಗೆ ಹೇಳಿದ್ದಾರೆ. "ಪ್ರಪಂಚದಲ್ಲೆಲ್ಲಾ ಅತ್ಯಂತ ಪ್ರಾಚೀನ ಧರ್ಮವೆಂದು ನಿರ್ಧರಿಸಲ್ಪಟ್ಟ ಶೈವಧರ್ಮ ಆದಿಮಾನವ ಕಾಲದಲ್ಲೇ ಉಗಮವಾದುದು. ಭಾರತದಲ್ಲಿಯೇ ಎಂಬುದು ಹಿರಿಮೆಯ ವಿಷಯ. ಆರು ಸಾವಿರ ವರ್ಷಗಳ ಹಿಂದೆಯೇ ನಾಗರಿಕತೆಗೆ ಹೆಸರಾದ ಸಿಂಧೂ ತೀರದ ದ್ರಾವಿಡರಲ್ಲಿ ಈ ಹಿಂದೆಯೇ ಉಗಮವಾಗಿ ಪ್ರಚಲಿತವಾಗಿದ್ದು ಲಿಂಗಾರ್ಚನೆ. ಲಿಂಗಧಾರಣೆಗಳನ್ನೊಳಗೊಂಡ ವೀರಶೈವ ಧರ್ಮದ ಆಧ್ಯಾತ್ಮ-ಅದಿದೈವ ಕಲ್ಪನೆಗಳ ಮೂಲರೂಪಗಳನ್ನು ಅಂದಿನಿಂದ ವೇದಾಗಮ ಉಪನಿಷತ್ತು ಪುರಾಣಗಳ ಕಾಲದಲ್ಲಿಯೂ ಇದುವರೆಗೂ ಆಗಿರುವ ಈ ಸನಾತನ ಧರ್ಮದ ಪ್ರಗತಿಯನ್ನು ಈ ಗ್ರಂಥದಲ್ಲಿ ನೋಡಬಹುದು. ಋಗ್ವೇದ ಕಾಲದಲ್ಲಿ ಕಾಣಬರುವ ತ್ರಿನೇತ್ರ-ತ್ರಿಶೂಲಧಾರಿ-ಸರ್ಪಭೂಷಣ-ಅರ್ಧನಾರೀಶ್ವರ-ಚಂದ್ರಚೂಡ-ಧವಳಗಿರಿ ನಿವಾಸ-ಸೃಷ್ಟಿಲಯ ಕರ್ತ ಯೋಗೀಶ್ವರ ಮೊದಲಾದ ಶಕ್ತಿ ವಿಶಿಷ್ಟ ಶಿವನ ಕಲ್ಪನೆಗಳಿಗೆ ಆರ್ಯರ ಆಗಮನಕ್ಕೆ ಮೊದಲೇ ದ್ರಾವಿಡರಲ್ಲಿ ಇದ್ದವೆಂಬುದನ್ನು ಆಧ್ಯಾತ್ಮಿಕ ವಿಷಯದಲ್ಲಿ ಇಷ್ಟು ಮುಂದುವರೆದು ದ್ರಾವಿಡ ಸಂಸ್ಕೃತಿಯ ಆರ್ಯ-ಸಂಸ್ಕೃತಿಯೊಡನೆ ಸೇರಿ ಹಾಲು ಜೇನು ಸೇರಿದಂತೆ ಸುಸ್ವಾದವಾಯಿತೆಂಬುದನ್ನು ಪ್ರಬಲ ಪ್ರಮಾಣಗಳೊಂದಿಗೆ ಈ ಗ್ರಂಥದಲ್ಲಿ ಪ್ರಸ್ತಾಪಿಸಲಾಗಿದೆ." ಹಲವಾರು ಗ್ರಂಥಗಳ ತಲಸ್ಪರ್ಶಿ ಅಧ್ಯಯನದಿಂದ ಮೂಡಿಬಂದ ಈ ಕೃತಿ ಶ್ರೀ ಮಲ್ಲಪ್ಪನವರ ವಿದ್ವತ್ತು ಆಳವಾದ ಪಾಂಡಿತ್ಯದ ದ್ಯೋತಕವಾಗಿದೆ.

ಪ್ರಶಸ್ತಿ ಗೌರವ : ಈಗಾಗಲೇ ಪ್ರಸ್ತಾಪಿಸಿದಂತೆ ಶ್ರೀ ಟಿ.ಎನ್. ಮಲ್ಲಪ್ಪನವರು ಘನಗ ವಿದ್ವಾಂಸರು, ಸಂಶೋಧಕರು, ಮಿಗಿಲಾಗಿ ಹೃದಯವಂತಿಯುಳ್ಳ ನ್ಯಾಯಮೂರ್ತಿಗಳು, ಮಾನವೀಯ ಮೌಲ್ಯಗಳನ್ನು ಜೀವನದಲ್ಲಿ ಅಳವಡಿಸಿಕೊಂಡಿದ್ದ ವಿನಯಶೀಲರು. ಅವರ ಸಂಸ್ಕೃತ ಅಧ್ಯಯನ ಆಳವಾದುದು. ಸಂಸ್ಕೃತ-ಇಂಗ್ಲೀಷ್-ಕನ್ನಡ ಭಾಷೆಗಳಲ್ಲಿ ಸಮಾನ ಪ್ರಭುತ್ವವನ್ನು ಹೊಂದಿದ್ದರು.





ಅವರ ವಿದ್ವತ್ ಪ್ರತಿಭೆ, ಮಾನವೀಯ ಗುಣಗಳನ್ನು ಗಮನಿಸಿದ ನಾಡಿನ ಅನೇಕ ಸಂಘ ಸಂಸ್ಥೆಗಳು ಸನ್ಮಾನಿಸಿ ಪ್ರಶಸ್ತಿಗಳನ್ನು ನೀಡಿ ಗೌರವಿಸಿವೆ.

"ವೇದವೇದಾಂತ ವಿದ್ಯಾವಾಚಸ್ಪತಿ" ಪ್ರಶಸ್ತಿಯನ್ನು ನೀಡಿ ಚಿತ್ರದುರ್ಗದ ಜಗದ್ಗುರುಗಳು ಗೌರವಿಸಿದರೆ, ಧಾರ್ಮಿಕ ಹಾಗೂ ಸಾಹಿತ್ಯ ಕ್ಷೇತ್ರದಲ್ಲಿ ಅವರು ಸಲ್ಲಿಸಿದ ಸೇವೆಗಾಗಿ ಈಶ್ವರ ಸೇವಾ ಮಂಡಳಿಯು 'ವಿದ್ಯಾಭಾಸ್ಕರ' ಎಂಬ ಪ್ರಶಸ್ತಿಯನ್ನು, ಕರ್ನಾಟಕ ಸರ್ಕಾರದ ಶಿಕ್ಷಣ ಇಲಾಖೆಯು ಏರ್ಪಡಿಸಿದ್ದ ಸಂಸ್ಕೃತ ವಿದ್ವಾಂಸರ ಸನ್ಮಾನ ಸಮಾರಂಭದಲ್ಲಿ ವೇದೋಪನಿಷತ್ತುಗಳ ಅಧ್ಯಯನದ ಸಲುವಾಗಿ ಇವರಿಗೆ ರಾಜ್ಯ ಪ್ರಶಸ್ತಿಯನ್ನು ನೀಡಿ ಗೌರವಿಸಿತು. ಧರ್ಮಸ್ಥಳದ ರತ್ನವರ್ಮ ಹೆಗ್ಗಡೆಯವರು ಬಿನ್ನವತ್ತಳೆಯನ್ನು ನೀಡಿ ಗೌರವಿಸಿದ್ದರು. ಅಲ್ಲದೆ ಗಿರಿಂಯಾಪುರದ ಶಿವಾದ್ವೈತ ತತ್ತ್ವ ಪ್ರಚಾರ ಸಮಿತಿಯವರು ಶಿವಾನುಭವ ಸಮ್ಮೇಳನದಲ್ಲಿ ಗೌರವಿಸಿ ಅಭಿನಂದನಾ ಪತ್ರವನ್ನು ಅರ್ಪಿಸಿದ್ದನ್ನು ಈ ಸಂದರ್ಭದಲ್ಲಿ ಸ್ಮರಿಸಬಹುದು. ಬಾಲಿಂಗ್ ಗ್ರೀನ್ ಯೂನಿವರ್ಸಿಟಿ, ಓಹಿಯೋ (ಯು.ಎಸ್.ಎ.) ಪ್ರಕಟಿಸಿದ 'Philosopher's Index Vol. VII Number-2 ಅವರ ಸಂಕ್ಷಿಪ್ತವಾದ ವಿವರ ಪ್ರಕಟವಾಗಿದೆ. ಹೊಂಬುಜ ಕ್ಷೇತ್ರದ ದೇವೇಂದ್ರಕೀರ್ತಿ ಭಟ್ಟಾರಕ ಪಟ್ಟಾಚಾರ್ಯವರ್ಯರು ಧರ್ಮ ಸಮ್ಮೇಳನದಲ್ಲಿ ಗೌರವಿಸಿ ಪ್ರಶಸ್ತಿಯನ್ನು ನೀಡಿದ್ದರು.

ವಿಧಿವಶ : ಎಂಬತ್ತೇಳು ವಸಂತಗಳ ಸಮಚಿತ್ತದಿಂದ ಬೇವು ಬೆಲ್ಲವನ್ನು ಸವಿದ ಶ್ರೀ ಟಿ.ಎನ್. ಮಲ್ಲಪ್ಪನವರು ಡಿಸೆಂಬರ್ ೧೬, ೧೯೮೮ ರಂದು ಬೆಂಗಳೂರಿನಲ್ಲಿ ವಿಧಿವಶರಾದರು. ಅವರ ನಿಧನ ವಾರ್ತೆಯನ್ನು ಕುರಿತು ಕನ್ನಡ ಪ್ರಭ, ಡೆಕ್ಕನ್ ಹೆರಾಲ್ಡ್, ಇಂಡಿಯನ್ ಎಕ್ಸ್‌ಪ್ರೆಸ್ ಮೊದಲಾದ ದಿನಪತ್ರಿಕೆಗಳು ಪ್ರಕಟಿಸಿ ಅವರ ಸಾಧನೆಯನ್ನು ಗುಣಗಾನ ಮಾಡಿದವು. ಅವರು ಭೌತಿಕವಾಗಿ ನಮ್ಮಿಂದ ದೂರವಾಗಿದ್ದರು ಕನ್ನಡದ ಶ್ರೇಷ್ಠ ನ್ಯಾಯಾಧೀಶರೂ, ತತ್ತ್ವಜ್ಞಾನಿಗಳೂ, ಸಂಶೋಧಕರೂ, ಸುಸಂಸ್ಕೃತ ವ್ಯಕ್ತಿಗಳೂ ಆದ ಶ್ರೀ ಟಿ.ಎನ್. ಮಲ್ಲಪ್ಪವರು ತಮ್ಮ ವಿದ್ವತ್ ಕೃತಿಗಳಿಂದ ನಾಡಿನ ವಿದ್ವತ್ ಪ್ರಪಂಚದಲ್ಲಿ ತಮ್ಮ ಹೆಸರು ಅಮರವಾಗಿರುವಂತೆ ಮಾಡಿದ್ದಾರೆ. ಅವರು ತಮ್ಮ ಸಾಧನೆಯ ಹೆಜ್ಜೆಗುರುತುಗಳನ್ನು ಉಳಿಸಿ ಹೋಗಿದ್ದಾರೆ.

## ಮೈದಾಳ ಕೆರೆಗೆ ಪೂಜ್ಯ ಶ್ರೀ ಶ್ರೀಗಳವರಿಂದ ಬಾಗಿನ ಅರ್ಪಣೆ




ಒಂದು ಕಾಲದಲ್ಲಿ ತುಮಕೂರು ನಗರಕ್ಕೆ ನೀರು ಪೂರೈಸುತ್ತಿದ್ದ ನಗರದ ಜೀವಜಲವೆಂದೇ ಪ್ರಖ್ಯಾತಿಯನ್ನು ಹೊಂದಿದ್ದ ಮೈದಾಳ ಕೆರೆ ಕೋಡಿ ಬಿದ್ದಿರುವುದರಿಂದ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ಕೆರೆಗೆ ಪೂಜೆ ಸಲ್ಲಿಸಿ ಬಾಗಿನ ಅರ್ಪಿಸಿದರು. ಈ ಸಂದರ್ಭದಲ್ಲಿ ಗ್ರಾಮ ಪಂಚಾಯತಿ ಅಧ್ಯಕ್ಷರು, ಸದಸ್ಯರು ಹಾಗೂ ಗ್ರಾಮಸ್ಥರು ಭಾಗವಹಿಸಿದ್ದರು.

ಲೇಖನ

# ನಡೆಯದ ನುಡಿಗಡಣದಿಂದಾಗಿಯೇ ಕಾಳಗ-ಕಲಹ

– ಸ.ರಾ. ಸುಳಕೂಡೆ *

ವ್ರತ, ಆಚಾರಗಳನ್ನು ಪಸರಿಸುವ ವಿದ್ಯಮಾನಗಳಿಗೆ ಎಂದೂ ಬರ ಬಂದಿಲ್ಲ. ಜನರ ಜೀವನವು ಸಂಕಟ-ಕಂಟಕ ಸಿಲುಕಿದಾಗಲೆಲ್ಲ ಈ ವ್ರತ, ಆಚಾರ, ಆರಾಧನೆ, ಶಾಂತಿ, ಪೂಜೆ, ಮಂಗಳಾರತಿ, ಅಭಿಷೇಕ ಮುಂತಾದವು ಸಾಕಷ್ಟು ಚೇತನಗೊಳ್ಳುತ್ತಲೇ ಇವೆ. ಜನರು ಏನಾದರೂ ಆಗಲಿ, ಬಂದ ಸಂಕಟ ಪರಿಹಾರವಾದರೆ ಸಾಕೆಂದು ಅರಿವಿನ ಕ್ಷಿತಿಜವನ್ನೇ ಅಳಿಸಿಕೊಂಡವರಂತೆ ವರ್ತಿಸುವುದು ಸಾಮಾನ್ಯ ಸಂಗತಿಯೇ ಆಗಿದೆ. ಸತ್ಯವನ್ನು ನಂಬದಂತೆ ಪರಿ-ಪರಿಯಾದ ನುಡಿಗಡಣ ಹಬ್ಬಿಸುವಲ್ಲಿ ಸಿದ್ಧಹಸ್ತರಾದವರು, ಏನೋ ಏನೋ ಅಸಾಧ್ಯವೆಂಬುದಿಲ್ಲೆಂದು, ಮಹಿಮೆ ಮಹಿಮೆಯನ್ನೇ ಪಾಲಿಸುವಂತೆ ನೋಡಿಕೊಳ್ಳುತ್ತಲೇ ನಡೆದಿದ್ದಾರೆ. ಯಾವುದು ಆದಲ್ಲಿ ಮಹಿಮೆ, ಆಗದಿದ್ದರೆ ಪ್ರಾರಬ್ಧ, ಏನೂ ಮಾಡಿದರೂ ಇಷ್ಟೇ ಎಂದು ನಂಬಿಸಿ, ತೆಪ್ಪಗೆ ಕೂರುವಂತೆ ಮಾಡುವುದು ನಿತ್ಯದ ಮಾತಾಗಿ ಹೋಗಿದೆ.

ಜನರು ಸತ್ಯವನ್ನು ನಂಬಿಕೊಂಡಿದ್ದರೂ, ಬದುಕಿನ ಎಡರು-ತೊಡರು ಮತ್ತು ಅದು-ಇದು-ಮತ್ತೊಂದು ಎಂಬ ಭಯಕ್ಕೆ ಸಿಲುಕಿ; ಅಲ್ಲಸಲ್ಲದ ಜಪ-ತಪ-ಆರಾಧನೆಗೂ, ಅಪಚಾರಕ್ಕೂ ಸಿದ್ಧರಾಗಿ ನಿಲ್ಲುತ್ತಲಿದ್ದಾರೆ. ಚಿಕ್ಕಪುಟ್ಟ ಮಾತು, ಮಾತುಗಳನ್ನು ನಿರ್ವಹಿಸುವಲ್ಲಿ ಎಡವುತ್ತಲೇ ಸಾಗುವ ಸ್ಥಿತಿಯನ್ನು ನಿರ್ಮಿಸುವ ಧೂರ್ತತನಕ್ಕೆ ಬಲಿಯಾಗುವವರೆಲ್ಲರೂ ಅಜ್ಞಾನಿಗಳು, ಅಸುಶಿಕ್ಷಿತರು, ಏನು ತಿಳಿಯದವರು ಎಂದೆಲ್ಲ ಹೇಳಲಿಕ್ಕಾಗದು. ಮನುಷ್ಯನಿಗೆ ಬದುಕುವ, ಅಸ್ತಿತ್ವ ಉಳಿಸಿಕೊಳ್ಳುವ ಅಗಾಧವಾದ ಜ್ಞಾನದ ಬಲವೂ, ಹೋರಾಡುವ ಛಲವೂ ಇದೆ. ಆದರೆ ಈ ಬಲ, ಛಲವನ್ನು ದಿಕ್ಕು ತಪ್ಪಿಸುವ ಹಿತಾಸಕ್ತರ ಗುಂಪು ಸತತ ಯಶಸ್ಸು ಸಾಧಿಸಿ, ಮಾನವೀಯ ಮೌಲ್ಯಗಳ ಹರಣವು ಅವ್ಯಾಹತವಾಗಿ ನಡೆಯುತ್ತಲಿದೆ. ಮನುಷ್ಯನಿಗೆ ಸುಖ, ಶಾಂತಿ, ನೆಮ್ಮದಿ, ಪ್ರಗತಿ, ಸಮೃದ್ಧಿ ಸಿಗಬೇಕಾದರೆ ಪ್ರಾಣಬಲಿ, ಯಜ್ಞ-ಯಾಗಾದಿಗಳು ಅಗತ್ಯವೆಂಬುದನ್ನು ಮನನ ಮಾಡಿರುವ ಶಕ್ತಿಗಳು ಜ್ಞಾನವನ್ನು ಅಜ್ಞಾನಕ್ಕೆ ತಿರುಗಿಸುವ ಅಮಾನುಷ್ಯ ಕೃತ್ಯಗಳೇ ಆಗಿವೆ. ಧರ್ಮದ ಹೆಸರಿನಲ್ಲಿ, ಸಮೃದ್ಧಿಯ ಸುಖ ತರುವುದೆಂಬ ನುಡಿಗಡಣದೊಳಗೆ ನಂಬಿಕೆ ಮುಟ್ಟಿಸಿ, ಅನಾಚಾರವನ್ನೇ ನಡೆಸಿಕೊಂಡು ಹೋಗುವ ಧೂರ್ತತನವನ್ನು ಭೇದಿಸುವಲ್ಲಿ ಶರಣರ ಕೊಡುಗೆ ಅನನ್ಯವು, ಅನುಕರಣೀಯವೂ ಆಗಿದೆ. ಮನುಷ್ಯನು ಸಭ್ಯನು-ಸ್ವತಂತ್ರನೂ ಆಗಬೇಕೆಂದು ಪ್ರಚಲಿತಕ್ಕೆ ಬಂದ ಧರ್ಮ, ದೇವರುಗಳ ಹೆಸರಿನಲ್ಲಿ ಮನುಷ್ಯನಲ್ಲಿಯ ಶಕ್ತಿ-ಸಾಮರ್ಥ್ಯವನ್ನು ಕುಗ್ಗಿಸುವ, ಸ್ವರ್ಗ-ನರಕಗಳ ಭಯಭೀತಿ ಹುಟ್ಟಿಸಿ, ದೋಚುವಿಕೆಗಳೆಲ್ಲವನ್ನು ಪರಾಮರ್ಶಿಸಿದ ಶರಣರು ಜನಜೀವನಕ್ಕೆ ಬದುಕಿನ ಮಹಾನತೆಯು ನಡೆದಂತೆ ನುಡಿವ ನುಡಿದಂತೆ ನಡೆಯುವಲ್ಲಿದೆಯೆಂದು ಮನವರಿಕೆಯನ್ನು ಮಾಡಿಕೊಳ್ಳರು. ಇದಲ್ಲದೆ ಮನುಷ್ಯನು ಅನುಸರಿಸಬೇಕಾದ ಧರ್ಮದ ಸ್ಪಷ್ಟತೆಯನ್ನು ಮಾಡಿದರು.

**ಎಲ್ಲೆಲ್ಲಿಯ ಪ್ರಾಣಿಯ ಕೊಲ್ಲದಿಹುದೆ ಧರ್ಮ,**
**ಒಲ್ಲದಿಪ್ಪುದೇ ತಪ.**
**ಪರವಧುವಿನ ಆಸೆ, ತನ್ನ ಮನದಲ್ಲಿ ಇಲ್ಲದಿರ್ದಡೆ.**
**ದೇವ ತಾನಲ್ಲಿಯೇ ಎಂದ,**

ಕಲಿದೇವಯ್ಯ ಶರಣರು ಇಹದ ಬದುಕನ್ನು ಎತ್ತರಿಸಿಕೊಂಡು, ಇಹದೊಳಗೆ ಸ್ವರ್ಗದ ಸವಲತ್ತುಗಳು ಇವೆ ಎಂಬುದನ್ನು ತೋರಿಸಿದರಲ್ಲದೆ ಜಪ-ತಪಗಳು ನಮ್ಮ ನಡೆ-ನುಡಿಯೊಳಗೆ ಏಕತೆ ತಂದುಕೊಂಡು ಜೀವ-ಜೀವಿಗಳಿಗೆ ರಕ್ಷಣೆ ಕೊಡುವುದಲ್ಲದೆ ಎಂದು ಖಾತರಿಪಡಿಸಿದರು. ಅವರು ಜೀವಪರ ಕಾಳಜಿಯನ್ನೇ ಧರ್ಮವನ್ನಾಗಿ ಮಾಡಿಕೊಂಡು, ನಡೆದು ದೇವ ತಾನಲ್ಲಿಯೇ ಎಂದು ದೃಢಪಡಿಸಿದರು.

* ೧೩೭೯, 'ಶ್ರೀ ಶಿವಪ್ರಸಾದ', ರಾಮತೀರ್ಥನಗರ, ಬೆಳಗಾವಿ-೫೯೦೦೧೫



**ದಯವಿಲ್ಲದ ಧರ್ಮವದೇವುದಯ್ಯಾ?**
**ದಯೆವೇ ಬೇಕು ಸರ್ವಪ್ರಾಣಿಗಳೆಲ್ಲರಲ್ಲಿ.**
**ದಯವೇ ಧರ್ಮದ ಮೂಲವಯ್ಯಾ,**
**ಕೂಡಲಸಂಗಯ್ಯನಂತಲ್ಲದೊಲ್ಲನಯ್ಯ.**

ಜಪ-ತಪಗಳೆಂದು ಪ್ರಾಣಿ ಬಲಿ, ದವಸ-ಧಾನ್ಯದ ದುರ್ಬಳಕೆ ಎಲ್ಲವನ್ನು ಪರಿಶೀಲಿಸಿದ ಶರಣರು, ನಮ್ಮ ನಡೆಯೊಳಗೆ ಸಭ್ಯತೆಯನ್ನು ತರುವ ಪ್ರಸಂಗಗಳೆಲ್ಲವನ್ನು ಮನದಟ್ಟು ಮಾಡಿದರು, ಮಾಡಿಕೊಂಡರು. ಅವರೆಂದೂ ಉಪದೇಶವನ್ನು ಮಾಡುವ ತೆವಲಿಗೆ ಬೀಳಲಿಲ್ಲ. ಸ್ವಾನುಭವದೊಂದಿಗೆ ಗುರುತಿಸಿಕೊಂಡಿದ್ದ ಶರಣರು ದಯವೇ ಧರ್ಮವೆಂದು; ಸಕಲರೊಂದಿಗೆ ಸಹ ಬಾಳ್ವೆಯನ್ನು ನಡೆದು ತೋರಿಸಿದ್ದಾರೆ. ಶರಣರು ಮೃದುವಚನಗಳೇ ಜಪ-ತಪವೆಂದು ಹೇಳಿ ಮಾನವೀಯ ನುಡಿಗಳಿಗೆ ಪ್ರಾಶಸ್ತ್ಯವನ್ನು ನೀಡಿದ್ದರಲ್ಲದೆ ಪ್ರತಿ ವ್ಯಕ್ತಿಯು ಸಭ್ಯತೆಯಿಂದ ಬದುಕಬೇಕೆಂದು ಸಹ ಅವರು ಅಭಿಲಾಷೆ ಹೊಂದಿದ್ದು ಮನನ ಯೋಗ್ಯವಾಗಿದೆ.

ಸಭ್ಯತೆಯನ್ನು ಗಳಿಸಿಕೊಳ್ಳುವುದೆಂದರೆ, ಜನಜೀವನದೊಳಗೆ ಒಂದಾಗಿ ಬದುಕುವುದಾಗಿದೆ. ಅಂದರೆ ದಯೆ, ಅಂತಃಕರಣಗಳ ಆಧಾರವನ್ನೇ ಬದುಕಿಗೆ ಮೂಲವನ್ನಾಗಿಸುವುದಾಗಿದೆ. ಶರಣರು ಈ ದಯೆ, ಅಂತಃಕರಣ ಗಳಿಸಿಕೊಳ್ಳಲು ಅನುಸರಿಸಿದ ಮಾರ್ಗವು ವೈಚಾರಿಕತೆಯ ನೆಲೆಯನ್ನು ವಿಸ್ತರಿಸಿಕೊಂಡರು. ಜನರು ಪ್ರತಿಯೊಂದಕ್ಕೂ ಆ ದಿನ ಈ ದಿನ ಎಂದು ಶುಭಾ-ಆಶುಭಗಳ ತಾಕಲಾಟದೊಳಗೆ ಸಿಲುಕಿಕೊಂಡು, ತೊಳಲಾಡುತ್ತಿದ್ದುದನ್ನು ಗಮನಿಸಿದ ಶರಣರು ಯಾವುದೇ ಅಂಜಿಕೆಯಿಲ್ಲದೆ ಎಲ್ಲ ದಿನಗಳು ಕಾಯಕದ ದಿನಗಳನ್ನಾಗಿಸಿಕೊಂಡರು.

**ಎಮ್ಮವರು ಬೆಸಗೊಂಡರೆ ಶುಭಲಗ್ನವೆನ್ನಿರಯ್ಯಾ,**
**ರಾಶಿಕೂಟ ಋಣಸಂಬಂಧವುಂಟೆಂದು ಹೇಳಿರಯ್ಯಾ,**
**ಚಂದ್ರಬಲ ತಾರಾಬಲವುಂಟೆಂದು ಹೇಳಿರಯ್ಯಾ,**
**ನಾಳಿನ ದಿನಕಿಂದಿನ ದಿನ ಲೇಸೆಂದು ಹೇಳಿರಯ್ಯಾ,**
**ಕೂಡಲಸಂಗಮದೇವನ ಪೂಜಿಸಿದ ಫಲ ನಿಮ್ಮದಯ್ಯ.**

ಮನುಷ್ಯನ್ನು ಧಾರ್ಮಿಕ ನೆಲೆಯನ್ನು ಅತ್ಯಂತ ಕಲುಷಿತಗೊಳಿಸಿಕೊಂಡು, ಕಂದಾಚಾರವನ್ನೇ ಅನುಸರಿಸುವುದು ಕ್ಷೇಮವೆಂದು ನಡೆದುಕೊಳ್ಳುವುದು ವಿಗತಿಯ ಇನ್ನೊಂದು ಮುಖವೇ ಆಗಿದೆ. ಮಾನವೀಯ ಸಂಬಂಧಗಳನ್ನು ಬಿಗಡಾಯಿಸುವ ನಡಾವಳಿಗಳನ್ನೇ ಪೂರೈಸಿಕೊಳ್ಳುವ ವ್ಯವಸ್ಥೆಗಳು ಇಂದಿಗೂ ಸಂಭ್ರಮಿಸುತ್ತಲಿವೆ. ಮನುಷ್ಯ-ಮನುಷ್ಯರೊಳಗೆ ದ್ವೇಷ, ಭೇದಭಾವ, ರೋಷಗಳನ್ನು ಹಬ್ಬಿಸುವ ಕುತ್ಸಿತ ಮನಸ್ಸುಗಳಿಗೆ ಪೋಷಕಾಂಶಗಳನ್ನು ಒದಗಿಸುವುದನ್ನೇ ಧರ್ಮಗಳು ಮಾಡಬಾರದೆಂದು; ಇಂದಿಗಿಂತ ನಾಳೆ, ಇಹಕ್ಕಿಂತಲೂ ಪರ ಮುಖ್ಯವೆಂದು ಗೊಂದಲ ಸೃಷ್ಟಿಸುವುದು ತರವಲ್ಲವೆಂಬುದೇ ಶರಣರ ಸ್ಪಷ್ಟತೆಯಾಗಿದೆ. ಇಂದಿನ ದಿನ ಲೇಸೆಂದು ಬದುಕುವ ಹುಮ್ಮಸ್ಸೇ ಮಾನವೀಯ ಬದುಕಿನ ಶಕ್ತಿ ಎಂದು ಶರಣರು ಹೇಳಿದ್ದು ಮಾರ್ಮಿಕವಾಗಿದೆ.

**ವಾರವೆಂದರಿಯೆ, ದಿನವೆಂದರಿಯೆ,**
**ಏನೆಂದರಿಯೆನಯ್ಯಾ,**
**ಇರುಳೆಂದರಿಯೆ, ಹಗಲೆಂದರಿಯೆ**
**ಏನೆಂದರಿಯೆನಯ್ಯಾ,**
**ನಿಮ್ಮ ಪೂಜಿಸಿ ಎನ್ನುವ ಮರೆದೆ**
**ಕೂಡಲಸಂಗಮದೇವಾ.**

ಮನುಷ್ಯನು ತನ್ನ ಬದುಕಿನೊಳಗೆ ಸಮಾಜಮುಖಿಯಾಗಿ ವರ್ತಿಸುವಲ್ಲಿ ಆಸಕ್ತಿ ಹೊಂದಿದಾಗ, ಏಕೋಭಾವವೇ ಸರ್ವತ್ರವೂ ಪಸರಿಸಿಕೊಳ್ಳುತ್ತದೆ. ಈ ಏಕತೆಯು, ಮನುಷ್ಯ-ಮನುಷ್ಯರೊಳಗೆ ನಂಬಿಕೆ, ವಿಶ್ವಾಸವನ್ನು ಭರಿಸುತ್ತದೆ. ವಿಶ್ವಾಸ, ನಂಬಿಕೆಯನ್ನು ಉಳಿಸಿಕೊಳ್ಳುವ ನಡೆ-ನುಡಿಗಳಿಂದಲೇ ಬದುಕಿನ ವೈಭವ ಕಂಡುಕೊಳ್ಳಲು ಸಾಧ್ಯವಾಗುತ್ತದೆ.

ಮಾನವ ಬದುಕಿನ ಭವ್ಯತೆಯನ್ನು ದಿವ್ಯತೆಯತ್ತ ತಿರುಗಿಸಿಕೊಳ್ಳುವ ಸರಳ ಮಾರ್ಗವನ್ನು ಶರಣರು ತಮ್ಮ ನಡೆ-ನುಡಿಗಳಲ್ಲಿ ಅಳವಡಿಸಿಕೊಂಡು ಹಗಲು-ಇರುಳಿನ ಮೇಲಾಟವನ್ನು ಮುಕ್ತಗೊಳಿಸಿದರು. ಇದಲ್ಲದೆ ಸಕಲರು ಒಂದೇ ಎಂಬ ವಿಶಾಲತೆಯೊಳಗೆ ವಿಸ್ತಾರಗೊಂಡು ನದಿ-ನದಿಯೊಳಗೆ ಬೆರೆತಂತೆ; ಭಾವದ ಮೇರೆಗಳನ್ನು ದಾಟಿದ್ದರಿಂದಲೇ ನುಡಿದಂತೆ ನಡೆದರು.

**ನಡೆಯದ ನುಡಿಗಡಣ, ಮಾಡದ ಕಲಿತನ,**
**ಚಿತ್ತದ ಸತಿಯ ಶೃಂಗಾರವದೇತಕ್ಕೆ ಪ್ರಯೋಜನ?**
**ಎಲೆಯಿಲ್ಲದ ಮರನು, ಜಲವಿಲ್ಲದ ನಡಿಯು,**
**ಗುಣೆಯಿಲ್ಲದ ಅವಗುಣೆಯ ಸಂಗವದೇತಕ್ಕೆ**
**ಪ್ರಯೋಜನ?**

**ದಯೆವಿಲ್ಲದ ಧರ್ಮ, ಉಭಯವಿಲ್ಲದ ಭಕ್ತಿಯು,**
**ನಯವಿಲ್ಲದ ಶಬ್ದವದೇತಕ್ಕೆ ಪ್ರಯೋಜನ**
**ಎನ್ನ ದೇವ ಚೆನ್ನಮಲ್ಲಿಕಾರ್ಜುನ.**

ಬದುಕಿನ ಉತ್ಕೃಷ್ಟತೆಯನ್ನು ದಯೆದೊಳಗೆ ಸಮೀಕರಿಸಿದ ಶರಣರು ಬದುಕು ಪ್ರಯೋಜನಕಾರಿ-ಫಲಕಾರಿಯಾಗುವ ನಯ-ವಿನಯವುಳ್ಳ ಶಬ್ದದೊಳಗೆ ಮಗ್ನಗೊಳಿಸಿಕೊಳ್ಳಲು ನಿವೇದಿಸಿದ್ದಾರೆ. ನಮ್ಮಲ್ಲಿ ಆಗಲಾರದ ಅದೆಷ್ಟೋ ತವಕ-ತಲ್ಲಣಗಳು ಆಕರ್ಷಿತ ವಾಗಿವೆ. ಇಂಥ ಪ್ರಲೋಭನೆಗೆ ಬೆನ್ನು ಹತ್ತಿ ಮನುಷ್ಯನು ದುಸ್ಸಂಗಕ್ಕೆ ಗುರಿಯಾಗಿ ನಿಲ್ಲುವ ಸಂಭವ ಇರುವುದು ಅರಿವಿಗೆ ಬಾರದೆ ಹೋಗುತ್ತದೆ. ಗುಣವಿಶೇಷತೆಗಳನ್ನೇ ಕಳಚಿಕೊಂಡು ಅಡಂಬರ-ಪ್ರದರ್ಶನ-ಸರ್ವರೊಳಗೆ ತೇಲಾಡುವವರ ಸಂಗದಿಂದ ದೂರಾದಷ್ಟು ನಮ್ಮ ಬದುಕು ನಿಜದ ನೆಲೆಯತ್ತ ಸಾಗುತ್ತದೆ.

**ಕಳಬೇಡ, ಕೊಲಬೇಡ, ಹುಸಿಯ ನುಡಿಯಲು ಬೇಡ,**
**ಮುನಿಯಬೇಡ, ಅನ್ಯರಿಗೆ ಅಸಹ್ಯಪಡಬೇಡ,**
**ತನ್ನ ಬಣ್ಣಿಸಬೇಡ, ಇದಿರ ಹಳಿಯಲು ಬೇಡ.**
**ಇದೇ ಅಂತರಂಗಶುದ್ಧಿ, ಇದೇ ಬಹಿರಂಗಶುದ್ಧಿ,**
**ಇದೇ ನಮ್ಮ ಕೂಡಲಸಂಗಮದೇವರನೊಲಿಸುವ ಪರಿ.**

ಮನುಷ್ಯನು ಇಂದು ವಿಪರೀತ ಅಕರ್ಷಣೆಗಳಿಗೆ ಜೋತು ಬಿದ್ದಿದ್ದಾನೆ. ಅದಕ್ಕಾಗಿ ಅವನು ತನ್ನ ವಿವೇಚನೆಯನ್ನೇ ಮರೆತು, ಏನೇನೋ ಮಾಡುತ್ತ, ಜಗದ ಬದುಕಿಗೆ ಸಂಚಕಾರ ತರುವತ್ತ ಮಗ್ನನಾಗಿದ್ದಾನೆ. ಇದು ಕಳ್ಳತನ, ಸುಳ್ಳುತನ, ಕೊಲೆಗಾರಿಕೆ, ಮುನಿಸು, ತೆಗಳಿಕೆ, ಮೂದಲಿಕೆ, ಅಟ್ಟಹಾಸಕ್ಕೆ ಮಣೆ ಹಾಕುವಂತೆ ಮಾಡಿ, ಶರಣರು ನಂಬಿ ಆಚರಣೆಗೆ ತಂದ ಅಂತರಂಗ-ಬಹಿರಂಗ ಶುದ್ಧಿಗೆ ಭಂಗ ಬರುವಂತೆ ಮಾಡುತ್ತಲಿದೆ. ಮನುಷ್ಯ ನೆಂದರೆ ಎಚ್ಚರ, ವಿವೇಕ, ವಿದ್ಯೆ, ವಿನಯ ಎಂದು ಹೇಳಬಹುದಾಗಿದೆ. ಅದರಂತೆ ಪರರದ್ದನ್ನು ಆಶಿಸದೇ ಇರುವುದಾಗಿದೆ. ಮನುಷ್ಯನು ತಾನು ಹೇಗೆ ಬದುಕಬೇಕು? ಎಂಬುದರ ಜೊತೆಗೆ ಪ್ರಾಮಾಣಿಕವಾಗಿ ಗಳಿಸಿಕೊಂಡು ಬದುಕಬೇಕೆಂಬ ಛಲಗಾರಿಕೆಯನ್ನಿಟ್ಟುಕೊಂಡಾಗ ಹುಸಿ ನುಡಿಯುವುದು; ಅಸಹ್ಯ ಪಡುವುದೆಲ್ಲವೂ ಶಮನ ಗೊಳ್ಳಲು ಸಾಧ್ಯವಾಗುತ್ತದೆ. ಶರಣರು ಅಂತರಂಗ-ಬಹಿರಂಗ ಶುದ್ಧಿಗೆ ಅಗತ್ಯವಿರುವ ನಡೆ-ನುಡಿಗಳನ್ನು ಅರಿತುಕೊಂಡು, ಅಳವಡಿಸಿಕೊಂಡು ಯಾವುದೇ ಅಳುಕಿಗೆ ಒಳಗಾಗಿ ಬದುಕಿದ್ದರಿಂದಲೇ ಸಂಸಾರದೊಳಗಿದ್ದು ಕೊಂಡು ಜಗದ ದುರಾಸೆ-ದುಃಖಗಳನ್ನು ಬಿಡಿಸಿ ಕೊಂಡರು. ಅವರು ಕೇವಲ ಹೇಳಿಕೆಗೆ, ತೋರಿಕೆಗೆ ಇನ್ನೊಬ್ಬರನ್ನು ಮೂರ್ಖನನ್ನಾಗಿಸುವುದಕ್ಕೆ ನಡೆ-ನುಡಿಗಳನ್ನು ಬೆಳೆಸಿಕೊಳ್ಳಲಿಲ್ಲ. ಅವರು ತಮ್ಮ ತಮ್ಮ ಕಾಯಕದೊಳಗೆ ಬೆರೆತು ಕಾಯಕ-ಕಾಯಕವನ್ನೇ ಬದುಕಿನ ದರ್ಶನ ಮಾಡಿಕೊಂಡ ಶರಣರು. ಶತಸಿದ್ಧಿ ಪಡೆದ ರೀತಿ ಅನನ್ಯವಾಗಿದೆ.

**ಜಂಬೂದ್ವೀಪ ನವಖಂಡ ಪೃಥ್ವಿಯೊಳಗೆ**
**ಕೇಳಿರಯ್ಯಾ ಎರಡಾಳಿನ ಭಾಷೆಯ**
**ಕೊಲುವೆನೆಂಬ ಭಾಷೆ ದೇವನದು,**
**ಗೆಲುವೆನೆಂಬ ಭಾಷೆ ಭಕ್ತನದು,**
**ಸತ್ಯವೆಂಬ ಕೂರಲಗನೆ ಕಳೆದುಕೊಂಡು,**
**ಸದ್ಭಕ್ತರು ಗೆದ್ದರು ಕಾಣಾ, ಕೂಡಲಸಂಗಮದೇವಾ.**

ದೇವರು, ದೇವತೆಗಳ ಪೂಜೆ, ಆರಾಧನೆಯೊಂದಿಗೆ ಶಾಪ-ಕೋಪ, ಸಂಹಾರ ಪ್ರತೀತಿಗಳನ್ನೆಲ್ಲ ಕಾಯಕದಿಂದ ದಾಟಿದ ಶರಣರು, ತಮ್ಮ ಬದುಕಿಗೆ ಸತ್ಯವನ್ನೇ ಶಕ್ತಿಯನ್ನಾಗಿ ಬಳಸಿಕೊಂಡರು. ಅವರು ದ್ವಂದ್ವಕ್ಕೆ ಎಳ್ಳಷ್ಟು ದಾರಿ ಕೊಡದೆ ನಡೆದುಕೊಂಡರು. ಅವರು ಭಕ್ತಿಗೂ ಸತ್ಯದ ದೀಕ್ಷೆಯನ್ನೇ ಕೊಟ್ಟರು. ಹೀಗಾಗಿ ಅವರಿಗೆ ಸತತವೂ ಸಂತಸದ ಸತ್ಸಂಗವೇ ದೊರೆಯಿತು ಮತ್ತು ಸೋಲು-ಗೆಲುವಿನ ಗೊಂದಲವೂ ಮಾಯಗೊಂಡಿತು.

**ಕರ್ತನೊಬ್ಬನೆ ದೇವ, ಸತ್ಯವೆ ಸುಭಾಷೆ,**
**ಭೃತ್ಯಾಚಾರವೆ ಆಚಾರವಯ್ಯಾ**
**ಮತ್ತೆ ದೇವರಿಲ್ಲ, ಮತ್ತೆ ಆಚಾರವಿಲ್ಲ,**
**ಮತ್ತೆ ಸುಭಾಷೆಯೆಂಬುದಿಲ್ಲ.**
**ಮಹಂತ ಸಕಳೇಶ್ವರದೇವರನೊಲಿಸಿದ ಪುರಾತರ ಪಥವಿದು,**
**ಅವಿತಥವಿಲ್ಲದ ನಂಬುವುದು.**

ಮನುಷ್ಯನು ಸತ್ಯವನ್ನೇ ಬದುಕಿನ ಸೂತ್ರವನ್ನಾಗಿ ಮಾಡಿಕೊಂಡಿದ್ದ ಶರಣರು, ಭೃತ್ಯಾಚಾರವೆ ಆಚಾರ ವನ್ನಾಗಿಸಿಕೊಂಡದ್ದು ಗಮನಾರ್ಹ ಸಂಗತಿಯಾಗಿದೆ. ಮನುಷ್ಯನು ಗರ್ವಕ್ಕೆ ಗುರಿಯಾದಷ್ಟು ಅವಿವೇಕತನ, ಧೂರ್ತತನಕ್ಕೂ ಆಸ್ಪದವು ದೊರೆಯುತ್ತದೆ. ಗರ್ವಕ್ಕೆ ಒಳಗೊಳ್ಳುವುದೆಂದರೆ, ಬದುಕಿಗೆ ಅಂಧಕಾರವನ್ನೇ ತಂದು



ಕೊಳ್ಳುವುದಾಗಿದೆ. ಇಂದು ವಿಜ್ಞಾನದ ಗತ್ತುಗಾರಿಕೆಯೊಳಗೆ ಮನುಷ್ಯನು ಅತ್ಯಂತ ಅವಿವೇಕಿತನ ನಡೆ-ನುಡಿಗಳಿಂದ ಆವೃತ್ತನಾಗಿದ್ದಾನೆ. ಅವನಿಗೆ ಸರಿ ಯಾವುದು? ಸರಿ ಹೊಂದಬೇಕಿರುವುದೇನು? ಸರಿಯಾಗಿ ಬದುಕುವುದು ಹೇಗೆ? ಎಂಬುದನ್ನು ಸರಿಯಾಗಿ ತಿಳಿದುಕೊಳ್ಳುವುದೆಂದರೆ ವಿನಯ, ಗುಣಶೀಲನಾಗುವುದು ಅಗತ್ಯವಿದೆ. ಶರಣರು ತಮ್ಮ ಬದುಕಿನೊಂದಿಗೆ ಸಹ್ಯತೆಯ ಸುಶೀಲತೆಯನ್ನೇ ಮೇಳೈವಿಸಿಕೊಂಡರು. ಅವರ ಜೀವನವೆಲ್ಲವು ಸುಸಂಗತ, ಸುವಿಚಾರಗಳ ಸಂಗಮವಾಗಿಯೇ ಹೊರಹೊಮ್ಮಿತು. ಅವರು ತಮ್ಮ ನಡಾವಳಿಗಳನ್ನು ಸುಸ್ಥಿತಿಯೊಳಗೆ ಚಲನಶೀಲಗೊಳಿಸಿ ಕೊಂಡ ಪರಿಯು ಗುಣಗ್ರಾಹಿ ಯಾಗಿದೆ, ಗೌರವಯುತವಾಗಿದೆ.

**ಕಣ್ಣೆ ಶೃಂಗಾರ ಗುರುಹಿರಿಯರ ನೋಡುವುದು,**
**ಕರ್ಣಕ್ಕೆ ಶೃಂಗಾರ ಪುರಾತನರ ಸಂಗೀತಂಗಳ**
**ಕೇಳುವುದು,**
**ವಚನಕ್ಕೆ ಶೃಂಗಾರ ಸತ್ಯವ ನುಡಿವುದು,**
**ಸಂಭಾಷಣೆಗೆ ಶೃಂಗಾರ ಸದ್ಭಕ್ತರ ನುಡಿಗಡಣ,**
**ಕರಕ್ಕೆ ಶೃಂಗಾರ ಸತ್ಪಾತ್ರಕ್ಕೀವುದು,**
**ಜೀವಿಸುವ ಜೀವನಕ್ಕೆ ಶೃಂಗಾರ ಗಣಮೇಳಾಪ,**
**ಇವಿಲ್ಲದ ಜೀವಿಯ ಬಾಳುವೆ ಏತಕ್ಕೆ**
**ಭಾರಯಯ್ಯಾ**
**ಚೆನ್ನಮಲ್ಲಿಕಾರ್ಜುನಾ?**

ಮನುಷ್ಯ ಬದುಕಿನೊಳಗೆ ಪಂಚೇಂದ್ರಿಯಗಳಲ್ಲಿ ಸಂಯಮವನ್ನು ತಂದುಕೊಳ್ಳುವುದು ಸುಲಭವ ಕಾರ್ಯವಲ್ಲ. ಪಂಚೇಂದ್ರಿಯಗಳಲ್ಲಿ ಸುಸಂಗತಿಗಳು ಕರಗತಗೊಳಿಸುವ ವಿಚಾರದೊಳಗೆ ಶರಣರು ಕಾಯಕ, ದಾಸೋಹ, ಸತ್ಸಂಗವನ್ನೇ ಭರಿಸಿಕೊಂಡರು. ಹೀಗಾಗಿ ಅವರ ನಡೆ-ನುಡಿಯೊಳಗೆ ಸತತ ಎಚ್ಚರಿಕೆ, ಜಾಗೃತಿ ಯನ್ನೆಲ್ಲ ಒಗ್ಗೂಡಿಸಿಕೊಂಡರು ಸರ್ವಕಾಲದೊಳಗೂ ಮಾನವೀಯ ಸಂಬಂಧಗಳಲ್ಲಿ ಗಾಢವಾದ ಸಂಪ್ರೀತಿ, ಸೌಹಾರ್ದತೆ, ಸಂತೋಷ ಉಳಿದುಕೊಳ್ಳುವ ಜೀವನ ಶೈಲಿಯು ರಸವತ್ತಾಗಿ ಹರಡಿಕೊಂಡಿದೆ. ಮನುಷ್ಯನು ಈ ಜಗವನ್ನೆಲ್ಲ ತನ್ನ ತೋಳ ತೆಕ್ಕೆಗೆಯೊಳಗೆ ಹಿಡಿದುಕೊಂಡಿರ ಬೇಕೆಂದು ಹಂಬಲಿಸುವಲ್ಲಿ ನಿರತಗೊಳ್ಳದೆ, ತನ್ನ ಇತಿಮಿತಿಯೊಳಗೆ ಕಣ್ಣು, ಕಿವಿ, ಜಿಹ್ವೆಗಳನ್ನು ಸರಿಯಾಗಿ ಶೃಂಗಾರದೊಳಗಿಟ್ಟುಕೊಂಡು ಕರದಿಂದ ಸತ್ಪಾತ್ರವನ್ನೇ ನೆರವೇರಿಸುತ್ತ ಸಾಗುವುದೇ ನಡೆ-ನುಡಿಗಳಲ್ಲಿ ಏಕತೆಯನ್ನು ಸಾಧಿಸುವ ಸಿದ್ಧತೆಯಾಗಿದೆ. ನಮ್ಮ ಎಲ್ಲ ದುಃಖ, ದುಗುಡ, ದುಡುಕು ರೋಷಾವೇಷಗಳೆಲ್ಲವೂ ತಹಬಂದಿಗೆ ಬಂದು ಸರ್ವ ಸುಸೂತ್ರವುಳ್ಳ ಮಾನವೀಯ ಬದುಕಿನ ಬೆಳಕು ನಡೆ-ನುಡಿಯ ಏಕತೆಗೊಳಗಿದೆಯೆಂಬ ಶರಣರ ಜೀವನ ವಿಧಾನಕ್ಕೆ ನಾವೆಲ್ಲ ಒಲಿದುಕೊಳ್ಳ ಬೇಕಾಗಿದೆ. ■

## ನಡೆದಾಡುವ ದೇವರು

ಮಕ್ಕಳೇ ದೇವರು ಎಂದರು ಸಿದ್ಧಗಂಗಾಶ್ರೀಗಳು
ನುಡಿದಂತೆ ನಡೆದರು ನಡೆದಾಡುವ ದೇವರು.

ಹಸಿದ ಹೊಟ್ಟೆಗೆ ತುತ್ತು ನೀಡಿದ ಮಾತೃಸ್ವರೂಪಿ ದೇವರು
ನಡೆ ಮುಂದೆ, ನಡೆ ಮುಂದೆ ನುಗ್ಗಿ ನಡೆ ಮುಂದೆ
ನಿನ್ನೊಡನೆ ನಾನಿರುವೆನೆಂದು ಧೈರ್ಯ ತುಂಬಿದ ತಂದೆಯಿವರು
ಮುದ್ದು ಮಕ್ಕಳ ತಿದ್ದಿ ತೀಡಿದ ಮಹಾಗುರುಗಳಿವರು
ಜಾತಿ, ಮತವೆಂಬ ಕಳೆ ಕಿತ್ತೊಗೆದ ಆಧುನಿಕ ಬಸವಣ್ಣರಿವರು
ಮನುಷ್ಯ ಜಾತಿ ಒಂದೇ ಎಂದು ಸಾರಿದ ದಿವ್ಯಜ್ಯೋತಿ ಇವರು

ದಾಸೋಹವೇ (ಅನ್ನ, ಅಕ್ಷರ, ಆಶ್ರಯ, ಅರಿವು) ಶ್ರೀಗಳ ಉಸಿರು
ದಾಸೋಹದಿಂದ ಉಸಿರು ನೀಡಿದ ಕಲ್ಪವೃಕ್ಷ ಇವರು
ತುತ್ತು ಅನ್ನದಿಂದೆ ಉಳುವ ಯೋಗಿಯ ಶ್ರಮವಿದೆಯೆಂದರು
ಶ್ರೀಗಂಧ ದೇಹವನು ಸದ್ದಿಲ್ಲದೆ ಕೊರಡಿನಂತೆ ಸವೆಸಿದ ಪೂಜ್ಯರಿವರು
ಇಷ್ಟಲಿಂಗ, ಸಮಾಜಲಿಂಗ ಪೂಜೆ ಮಾಡಿದ ಶಿವ ಭಕ್ತರಿವರು
ಮನೆ, ಮನೆಗೂ ಶಿವಬೆಳಕು ನೀಡಿದ ಮಹಾತಪಸ್ವಿಗಳಿವರು
ಧರ್ಮ, ಕರ್ಮ, ಜ್ಞಾನದ ದೀಪ ಹಚ್ಚುತ ನಡೆದಾಡಿದ ಋಷಿಗಳಿವರು
ನಾಡೆಲ್ಲ ಹೇಳುತಿದೆ ಭಾರತ ಮಾತೆಯ ರತ್ನದ ಹಾರ ಇವರು
ನೋಡು, ನೋಡಿಲ್ಲಿ ಬರುವುದು ಭಕ್ತರ ದಂಡು
ಭಕ್ತರ ಮನದಲ್ಲಿ, ಸಂತರಸಂತ ಸದಾ ಜೀವಂತವೆಂದು
ದೇವರಿಲ್ಲವೆಂದು ಕೊರಗಬೇಡ ಎಂದು
ಇರುವರು, ಈ ಶತಮಾನ ಕಂಡ ದೇವರಿಲ್ಲಿ ಎಂದೆಂದೂ

ಡಾ|| ಎನ್.ಟಿ. ಅನಿಲ್
೨೪೭, ೨ನೇ ಬ್ಲಾಕ್, ೩ನೇ ಹಂತ, ೩ನೇ 'ಬಿ' ಕ್ರಾಸ್,
ಬಸವೇಶ್ವರನಗರ, ಬೆಂಗಳೂರು-೫೬೦೦೭೯







ಚಿಂತನೆ

# ಸೇವೆ ಮತ್ತು ಅಭ್ಯುದಯ

– ನಾ.ಮ. ಬಸವರಾಜಯ್ಯ *

ಭಾರತೀಯ ಆಧ್ಯಾತ್ಮಿಕ ಪ್ರಪಂಚದಲ್ಲಿ 'ಸೇವೆ' ಒಂದು ಪವಿತ್ರ ಸ್ಥಾನಗಳಿಸಿದೆ. ಸೇವೆ ಎಂಬುದಕ್ಕೆ ಅನೇಕ ಅರ್ಥಗಳಿದ್ದರೂ, ಬಹುಮಂದಿ ಸೇವೆ ಎಂಬುದಕ್ಕೆ ದಾಸನಾಗುವುದು ಎಂಬರ್ಥದಲ್ಲಿ ತಿಳಿದುಕೊಂಡಿದ್ದಾರೆ. ಆದರೆ ಸೇವೆ ಎಂದರೆ, ಸೇವಕ ಎಂಬ ಪದಕ್ಕೆ ಕಿಟಲ್ ನಿಘಂಟು 'Worshiper' ಎಂಬರ್ಥ ಇದೆ. ವೈಷ್ಣವರಲ್ಲಿ 'ಹರಿದಾಸ'ರೆಂಬ ಭಾವನೆ ಇದೆ. ಇದು ತಪ್ಪಲ್ಲ. ವೀರಶೈವರಲ್ಲೂ ಸಹಿತ ಸೇವೆ ಎಂಬುದಕ್ಕೆ 'ದಾಸೋಹ' ಎಂಬರ್ಥ ಆಗುತ್ತದೆ.

'ಸೇವೆ'ಯಲ್ಲಿ ದೈಹಿಕ, ಮಾನಸಿಕ, ಬೌದ್ಧಿಕ, ನೈತಿಕ, ಆಧ್ಯಾತ್ಮಿಕ ಎಂದು ಐದು ರೀತಿಯಲ್ಲಿ ವಿಭಾಗ ಮಾಡಿದರೆ ಒಳಿತೆಂದು ಕಾಣುತ್ತದೆ. ಒಬ್ಬ ರೋಗಿಗೆ ಔಷದೋಪಚಾರ ಮಾಡುವುದು ದೈಹಿಕ. ಅವನಿಗೆ ಈ ರೋಗ ಬೇಗನೆ ವಾಸಿಯಾಗುತ್ತದೆ. ಅನುಭವಿಕ ವೈದ್ಯರು ಸರಿಯಾದ ಔಷಧ ಕೊಟ್ಟಿದ್ದಾರೆ, ನಿನೇನೂ ಭಯಪಡಬೇಡ ಎಂದು ಹೇಳುವುದು ಮಾನಸಿಕ, ಅವನು ಸ್ವಲ್ಪ ಗುಣವಾಗುತ್ತಾ ಬಂದಾಗ; ವಿವೇಕ ಮಾತುಗಳನ್ನು ಮಾರ್ಗದರ್ಶನ ಮಾಡಿದರೆ ಬೌದ್ಧಿಕ. ಇನ್ನೇನು ಪರವಾಗಿಲ್ಲ ಒಂದು ವಾರ ಕಳೆಯಿತು, ನೀನು ಸಹ ಹಸನ್ಮುಖನಾಗಿದ್ದಿ ಎಂದು ಅವನಿಗೆ ನೀಡುವ ಧೈರ್ಯ ನೈತಿಕ. ಮುಂದೆ ನೀನು ಲೌಕಿಕವನ್ನು ಪಾರಮಾರ್ಥಿಕವನ್ನು ಔಣನಾಗಿ ನಡೆಸಿಕೊಂಡು, ಹಿರಿಯರ, ಸಂತರ, ಶಿವಯೋಗಿಗಳ, ಮಹಾತ್ಮರ ಸದುಪದೇಶದಂತೆ ನಡೆದಿದ್ದಾದರೆ ಅದುವೇ ಆಧ್ಯಾತ್ಮಿಕ ಜಾಗೃತಿಯಾಗುವುದರಲ್ಲಿ ಯಾವ ಸಂಶಯವಿಲ್ಲ.

ಮೇಲ್ಕಂಡ ಮಾತುಗಳು ದೃಷ್ಟಾಂತವಾದರೆ, ಮಾತಾಪಿತೃಗಳ ಸೇವೆ, ಪೂಜ್ಯ ಗುರುಗಳ ಸೇವೆ, ಮಠ ಮಂದಿರ, ದೇವಾಲಯಗಳ ಸೇವೆ, ರೋಗಿಗಳು, ದೀನದಲಿತರ ಸೇವೆ, ಅನಾಥರ, ವೃದ್ಧರ ಸೇವೆ, ನಿರಕ್ಷರಿಗಳಿಗೆ ಅಕ್ಷರಗಳನ್ನು ಕಲಿಸುವುದು, ಮುಂತಾದ ಸೇವೆ ಮಾಡುವುದರಲ್ಲಿ ನಿರತರಾದರೆ ಅದುವೇ ಮಾನವ ಸೇವೆ. ಅವರೇ ದೇವಮಾನವರೆನ್ನಬಹುದು. ಇದೆಲ್ಲಾ ಸೇವೆ ಮಾಡಿ ಪ್ರತಿಫಲ ಬಯಸಿದರೆ ಅದು ಸೇವೆಯಲ್ಲ. ಪ್ರತಿಫಲ ನೀನು ಬಯಸದಿದ್ದರೂ ದೇವರು ಯಾವ ರೂಪದಲ್ಲಾದರೂ ನಿನಗೆ ಫಲವ ಕೊಡುವನು, ತಾಳ್ಮೆಬೇಕು, ಶಾಂತಿ, ಸಹನೆಯಿಂದಿರುವದಲ್ಲದೆ, ನಿಗರ್ವಿಯಾಗಿರಬೇಕು.

ಮಾತಾ ಪಿತೃಗಳ ಋಣ, ಗುರುವಿನ ಋಣ, ದೇವರ ಋಣವೆಂದರೆ ಸಮಾಜ ಋಣ, ಇವು ವಿಚಾರವಂತನಿಗೆ ಆದರ್ಶ ಮಾರ್ಗದರ್ಶನ ನೀಡುವ ಕ್ರಿಯಾಶೀಲ ಸೇವೆ, ನಿರಾಡಂಬರವಾಗಿ, ನಿಸ್ಪೃಹತೆಯಿಂದ, ಅಂತರಂಗ ಬಹಿರಂಗಗಳಲ್ಲಿ ನಿರ್ಮಲವಾಗಿ ಮಾಡಿದ್ದಾದರೆ ಅವರ ಮನಸ್ಸು ಏಕಾಗ್ರತೆಯಿಂದ ಸಚ್ಚಿದಾನಂದ ಸ್ವರೂಪದಲ್ಲಿ ಧ್ಯಾನ ಮಗ್ನನಾದರೆ, ನಿಜಾನಂದವೆನಿಸುತ್ತದೆ. ನಿಜಾನಂದದಲ್ಲಿ ತನ್ನನ್ನೇ ತಾನು ಮೈಮರೆಯುತ್ತಾನೆ. ಅದುವೇ ಆತ್ಮಾನಂದ, ಆತ್ಮೈಕ್ಯವಾಗಿ ಅವಿರಳ ಪರಂಜ್ಯೋತಿಯಲ್ಲಿ ಬೆರೆತಾಗ ಸಾಮಾನ್ಯ ಮಾನವ, ಭವ್ಯಮಾನವನಾಗಿ ಕಂಗೊಳಿಸುತ್ತಾನೆ. ನಿರಂತರ 'ಸತ್ಯವೇ ಹರನು, ಹರನೇ ಸತ್ಯ' ಎಂಬ ಮಹಾಕವಿ ರಾಘವಾಂಕನ ಮಾತನ್ನು ಮನಗಂಡು ಕ್ರಿಯಾ ವಿಶ್ರಾಂತಿಯಲ್ಲಿ ತಲ್ಲೀನನಾಗುವವನಲ್ಲಿ 'ಸೇವೆ' ಎಂಬುದು ಸಾರ್ಥಕತೆ ಪಡೆಯುತ್ತದೆ.

'ಸೇವೆ' ಸಾವನರಿಯದು, ಸಾವು ತನ್ನನರಿಯದು, ಸೇವೆಯಿಂದ ತನ್ನ ಅಭ್ಯುದಯವಾಗುವುದು, ಸೇವೆ ಮತ್ತು ಅಭ್ಯುದಯ ಕೆಲವರ, ಅಥವಾ ಶೈಕ್ಷಣಿಕ ಸಂಸ್ಥೆಗಳ ಧ್ಯೇಯ ವಾಕ್ಯಗಳಾಗಿರುವವು. ಹಿರಿಯರನ್ನು, ಪೂಜ್ಯರನ್ನು, ಮಕ್ಕಳನ್ನು, ಸ್ತ್ರೀಯರನ್ನು ಪವಿತ್ರ ಹೃದಯದಿಂದ, ನೋಡುವುದು, ಅವರ ಇಚ್ಛೆಗನುಸಾರ ಸಹಾಯ, ಸೌಕರ್ಯವನ್ನು ಮಾಡುವುದೂ ಒಂದು ತರದ ಸೇವೆ. ಅದುವೇ ಪೂಜೆ ಎಂದರೆ ತಪ್ಪಲ್ಲ. ಸೇವಾ ಕೈಂಕರ್ಯ ಪ್ರತಿಯೊಬ್ಬ ಮಾನವನಿಗೆ ಅವಶ್ಯ ಬೇಕೇಬೇಕು.

'ಕಾಯಕವೇ ಕೈಲಾಸ' ಎಂದಂತೆ 'ಸೇವೆ' ಮತ್ತು 'ಅಭ್ಯುದಯ'. ಸೇವೆ ಕಾಯಕವಾದರೆ ಅಭ್ಯುದಯ ಕೈಲಾಸ. 'ಮಾತಿಗೆ ಅರಿವಿಲ್ಲ, ಮೌನಕ್ಕೆ ಅರಿವುಂಟು' ಸೇವಾ ಭಾವನೆಯುಳ್ಳವರಿಗೆ ಯಾರ ಪ್ರಶಸ್ತಿಯೂ ಬೇಕಿಲ್ಲ. 'Service is its own Reward' ಅಲ್ಲವೇ, ಶ್ರೀ ಸಿದ್ಧಗಂಗಾ ಶಿವಕುಮಾರ ಮಹಾಸ್ವಾಮಿಗಳಿಗೆ ಭಾರತರತ್ನ ಪ್ರಶಸ್ತಿ ಸಿಗಲಿಲ್ಲವೆಂಬ ಕೊರಗು ನಮ್ಮದೇ ಹೊರತು ಅವರಿಗಿರಲಿಲ್ಲ. ಅವರ ಅಸಮಾನ್ಯ ಸೇವೆಯಿಂದ, ಅಬಾಲ ವೃದ್ಧರೂ ಪುನೀತರಾಗಿದ್ದಾರೆ. ಅವರ ಸತ್ಸೇವೆ, ಸದಾಚಾರ, ಸದ್ವಿಚಾರಗಳಿಂದ ಒಂದು ನೂರಾ ಹನ್ನೊಂದು ವರ್ಷ ಬಾಳಿ ಬದುಕಿ, ಬೆಳಕಾದರು, ವಿಶ್ವಕ್ಕೆ ವಿಸ್ಮಯರಾದರು. 'ಸೇವೆ' ಎಂಬ ಪದಕ್ಕೆ ಅವರೇ ದೃಷ್ಟಾಂತರಾದರು. ■

* ನಾಗರಹಾಳು-೫೮೩೧೧೭. ಸಿರುಗುಪ್ಪ ತಾಲ್ಲೂಕು, ಬಳ್ಳಾರಿ ಜಿಲ್ಲೆ







ವರದಿ

# ಸಿದ್ಧಗಂಗಾ ವೈದ್ಯಕೀಯ ಮಹಾವಿದ್ಯಾಲಯ ಮತ್ತು ಸಂಶೋಧನಾ ಸಂಸ್ಥೆ

**ಎರಡನೇ ಬಾರಿ ಯಶಸ್ವಿ ಕಿಡ್ನಿ ಕಸಿ ಶಸ್ತ್ರಚಿಕಿತ್ಸೆ :** ಜುಲೈ ೨೪ ರಂದು, ಸಿದ್ಧಗಂಗಾ ಆಸ್ಪತ್ರೆಯಲ್ಲಿ ಯಶಸ್ವಿ ಕಿಡ್ನಿ ಕಸಿ ಶಸ್ತ್ರಚಿಕಿತ್ಸೆ ನಡೆಸಲಾಯಿತು. ನೆಫ್ರಾಲಜಿಸ್ಟ್ ಡಾ.ಗಣೇಶ್ ಎಸ್.ಪ್ರಸಾದ್ ನೇತೃತ್ವದ ತಂಡದಿಂದ ನಡೆದ ಯಶಸ್ವಿ ಶಸ್ತ್ರಚಿಕಿತ್ಸೆಯಲ್ಲಿ ಮಧುಗಿರಿ ತಾಲೂಕಿನ ೨೧ ವರ್ಷದ ಕಿತ್ತಗ್ಲಿಯ ಲೋಕೇಶ್ ಎಂಬ ಯುವಕನಿಗೆ, ಆತನ ತಂದೆಯೇ ಕಿಡ್ನಿ ದಾನ ಮಾಡಿದ್ದರು. ಈ ಯಶಸ್ಸಿನ ಕುರಿತು ಅಂದು ಪತ್ರಿಕಾಗೋಷ್ಠಿ ನಡೆಸಲಾಯಿತು.

'ಸಿದ್ಧಗಂಗಾ ಆಸ್ಪತ್ರೆಯಲ್ಲಿ ಎರಡನೇ ಬಾರಿಗೆ ಯಶಸ್ವಿ ಕಿಡ್ನಿ ಕಸಿ ನಡೆಸಲಾಗಿದೆ. ತಂದೆಯೇ ಮಗನಿಗೆ ಕಿಡ್ನಿ ದಾನ ಮಾಡುವ ಮೂಲಕ ಜೀವದಾನ ಮಾಡಿದ್ದು ಇತ್ತೀಚಗೆ ನಾವು ಆಚರಿಸಿದ ವಿಶ್ವ ಅಪ್ಪಂದಿರ ದಿನಕ್ಕೆ ಇದು ಅರ್ಥಪೂರ್ಣ ಉದಾಹರಣೆಯಾಗಿದೆ' ಎಂದು ಸಿದ್ಧಗಂಗಾ ಆಸ್ಪತ್ರೆ ನಿರ್ದೇಶಕ ಡಾ.ಎಸ್.ಪರಮೇಶ್ ಅಭಿಪ್ರಾಯಪಟ್ಟರು.



೨೧ ವರ್ಷದ ಯುವಕನಿಗೆ ಕಿಡ್ನಿ ಕಸಿ ಮಾಡಲು ಮುಂದಾದಾಗ ಸಿದ್ಧಗಂಗಾ ಮಠಾಧ್ಯಕ್ಷರಾದ ಸಿದ್ಧಲಿಂಗ ಶ್ರೀಗಳು ಬಡ ಯುವಕನ ಕುಟುಂಬಕ್ಕೆ ಆರ್ಥಿಕ ಹೊರೆಯಾಗದಂತೆ ಶಸ್ತ್ರಚಿಕಿತ್ಸೆ ನಡೆಸಿ ಎಂದು ನಿರ್ದೇಶನ ನೀಡಿದ್ದರು, ಅವರ ಮಾತಿನಂತೆ ದಾನಿಗಳ ನೆರವು ಪಡೆದುಕೊಂಡು, ವೈದ್ಯಕೀಯ ವೆಚ್ಚ ಸರಿದೂಗಿಸಲು ಅಂತಿಮವಾಗಿ ನಮ್ಮ ವೈದ್ಯರೇ ನೆರವು ನೀಡಿ ಈ ಕಸಿ ಯಶಸ್ವಿಯಾಗಿಸಿದ್ದಾರೆ' ಎಂದು ಹರ್ಷ ವ್ಯಕ್ತಪಡಿಸಿದರು.

ಯುರಾಲಜಿಸ್ಟ್ ಡಾ.ರಂಗೇಗೌಡ ಮಾತನಾಡಿ '೨೧ ವರ್ಷದ ಯುವಕ ಲೋಕೇಶ್ ಕಳೆದ ನಾಲ್ಕು ವರ್ಷಗಳಿಂದ ಕಿಡ್ನಿ ವಿಫಲತೆಯಿಂದ ನಮ್ಮ ಆಸ್ಪತ್ರೆಗೆ ಬಂದಾಗ ಆತನಿಗೆ ಕಿಡ್ನಿ ಕಸಿಯ ಎಲ್ಲಾ ಸಾಧ್ಯತೆಗಳನ್ನು ನಾವು ಚಿಂತಿಸಿದೆವು. ಯುವಕನ ತಂದೆ ಕಿಡ್ನಿ ಕಸಿಗೆ ಯಾವುದೇ ಅಂಜಿಕೆಯಿಲ್ಲದೆ ಒಪ್ಪಿಕೊಂಡರು, ಕಳೆದ ವಾರವಷ್ಟೇ ಯಶಸ್ವಿ ಕಿಡ್ನಿ ಕಸಿ ನಡೆಸಿದ್ದು ಯುವಕ ಹಾಗೂ ಆತನ ತಂದೆ ಇಬ್ಬರೂ ಕೂಡ ಆರೋಗ್ಯವಾಗಿ ಮನೆಗೆ ಮರಳಿದ್ದಾರೆ' ಎಂದು ಹೇಳಿದರು.

ನೆಫ್ರಾಲಜಿಸ್ಟ್ ಡಾ.ಗಣೇಶ್ ಎಸ್ ಪ್ರಸಾದ್ ಮಾತನಾಡಿ 'ಇಂದಿಗೂ ಸಾವಿರಾರು ಜನ ಕಿಡ್ನಿ ವಿಫಲತೆಯಿಂದ ದಾನಿಗಳ ಅಲಭ್ಯತೆಯ ಕಾರಣಕ್ಕಾಗಿ ಡಯಾಲಿಸಿಸ್ ನಲ್ಲೇ ಜೀವನ ಕಳೆಯುವಂತಾಗಿದ್ದು, ಇಂತಹ ಉದಾಹರಣೆಗಳನ್ನು ನೋಡಿ ಕಿಡ್ನಿ ಕಸಿಗೆ ಒಳಪಟ್ಟು ಸುದೀರ್ಘ ಜೀವನ ನಡೆಸಬೇಕು' ಎಂದರು.

ಕಿಡ್ನಿ ಕಸಿಗೆ ಒಳಗಾದ ಯುವಕ ಲೊಕೇಶ್ ಮಾತನಾಡಿ, ಆರ್ಥಿಕವಾಗಿ ಸಂಕಷ್ಟಕ್ಕೆ ಒಳಗಾಗಿದ್ದ ನಮಗೆ ಆಸ್ಪತ್ರೆಯ ಇಡೀ ವೈದ್ಯ ಬಳಗ ಧೈರ್ಯತುಂಬಿದರು. ದಾನಿಗಳೂ ಕೂಡ ತಮ್ಮ ಕೈಲಾದ ನೆರವು ನೀಡಿದರು ನಮ್ಮ ತಂದೆಯ ತ್ಯಾಗ ಹಾಗೂ ವೈದ್ಯರಿಂದ ನನಗೆ ಮರುಜನ್ಮ ದೊರೆತಿದೆ' ಎಂದು ಸಂತಸ ವ್ಯಕ್ತಪಡಿಸಿದರು.

ಸಿದ್ಧಗಂಗಾ ಮೆಡಿಕಲ್ ಕಾಲೇಜಿನ ಮೆಡಿಕಲ್ ಮೇಲ್ವಿಚಾರಕ ಡಾ.ನಿರಂಜನಮೂರ್ತಿ, ಯುರಾಲಜಿಸ್ಟ್ ಡಾ.ನರಸಿಂಹಮೂರ್ತಿ, ಯುರಾಲಜಿಸ್ಟ್ ಡಾ.ಅಭಿಲಾಷ್, ಐಸಿಯು ಸ್ಪೆಷಲಿಸ್ಟ್ ಡಾ.ಮಧು.ಕೆ.ಆರ್. ಡಾ.ಶಶಿಕಿರಣ್, ಸಿಇಓ ಡಾ.ಸಂಜೀವ್ ಕುಮಾರ್, ಪಿಆರ್‌ಓ ಕಾಂತರಾಜು, ಟ್ರಾನ್ಸಪ್ಲಾಂಟ್ ಕೋಆರ್ಡಿನೇಟರ್ ಕಾರ್ತಿಕ್ ಹಾಗೂ ಯುವಕನ ಕುಟುಂಬಸ್ಥರು ಹಾಜರಿದ್ದರು.

**ಒಂಭತ್ತು ದಿನ ಕೋಮದಾದಲ್ಲಿದ್ದ ಯುವಕನಿಗೆ ಮರು ಜನ್ಮ:** ಸಿದ್ಧಗಂಗಾ ಆಸ್ಪತ್ರೆಗೆ ೩೦ ವರ್ಷದ ಕರಣ್ ಎಂಬಾತ ಅಪಘಾತವೊಂದರಲ್ಲಿ ಬಹುಮೂಳೆಗಳ ಮುರಿಯುವಿಕೆ ಯಿಂದ ತೀವ್ರತರ ಪೆಟ್ಟಾಗಿ ಆಸ್ಪತ್ರೆಯ ತುರ್ತು ಅಪಘಾತ ವಿಭಾಗಕ್ಕೆ ದಾಖಲಾಗಿದ್ದರು. ೯ ದಿನಗಳ ಕಾಲ ಕೋಮಾದಲ್ಲಿದ್ದ ಯುವಕನ ತಲೆಗೆ ತೀವ್ರತರ ಪೆಟ್ಟಾಗಿದ್ದರಿಂದ ಆಪರೇಷನ್ ಮಾಡುವ ಪರಿಸ್ಥಿತಿಯೂ ಇರಲಿಲ್ಲ. ನರರೋಗ ಶಸ್ತ್ರಚಿಕಿತ್ಸಾ ತಜ್ಞ ಡಾ.ಅಜಯ್ ನೇತೃತ್ವದ ತಂಡ ಹಾಗೂ ಐಸಿಯುವ ವಿಭಾಗದ ಯಶಸ್ವಿ ಚಿಕಿತ್ಸೆಯಿಂದ ಕರಣ್ ಮರುಜನ್ಮ ಪಡೆದು ಎಂದಿನಂತೆ ನಡೆಯುವಂತಾದರು.

**ಶ್ರೀಗಳ ಜನ್ಮಸ್ಮರಣೆಗಾಗಿ ೨೫ ಕ್ಕೂ ಹೆಚ್ಚು ಕೀಲು, ಮೂಳೆ ಶಸ್ತ್ರಚಿಕಿತ್ಸೆ :** ಶಿವಕುಮಾರ ಶ್ರೀಗಳ ಜನ್ಮ ಸ್ಮರಣೆಗಾಗಿ ಏಪ್ರಿಲ್ ೧ ರಂದು ಸಿದ್ಧಗಂಗಾ ಆಸ್ಪತ್ರೆ ಹಾಗೂ ಸ್ಪೈರ್ ಕ್ಲೀನಿಕ್ ಸಹಯೋಗದಲ್ಲಿ ಪ್ರಾರಂಭವಾಗಿದ್ದ ಸಿದ್ಧಗಂಗಾ ಸೂಪರ್ ಸ್ಪೆಷಾಲಿಟಿ ಆರ್ಥೋಪೆಡಿಕ್ ಸೆಂಟರ್‌ನಲ್ಲಿ ೨೫ ಕ್ಕೂ ಹೆಚ್ಚು ಯಶಸ್ವಿ ಶಸ್ತ್ರಚಿಕಿತ್ಸೆ ನೆರವೇರಿಸಲಾಗಿದೆ. ಈ ಕುರಿತು ಮಾಹಿತಿ ನೀಡಿದ ಸಿದ್ಧಗಂಗಾ ಆಸ್ಪತ್ರೆ ನಿರ್ದೇಶಕ ಡಾ.ಎಸ್.ಪರಮೇಶ್ ಶ್ರೀಗಳ ಜನ್ಮ ಸ್ಮರಣೆಗಾಗಿ ೧೧೫ ಕೀಲು,ಮೂಳೆ ಬೆನ್ನುಮೂಳೆಗೆ ಸಂಬಂಧಿಸಿದ ರಿಯಾಯಿತಿ ದರದ ಶಸ್ತ್ರಚಿಕಿತ್ಸೆಗಳನ್ನು ನೆರವೇರಿಸುವ ಸಲುವಾಗಿ ಆರಂಭವಾಗಿದ್ದ ಸೆಂಟರ್‌ಗೆ ಉತ್ತಮ ಪ್ರತಿಕ್ರಿಯೆ ವ್ಯಕ್ತವಾಗಿದ್ದು ಇನ್ನೂ ಹೆಚ್ಚಿನ ಆಪರೇಷನ್ ಮುಂದಿನ ದಿನಗಳಲ್ಲಿ ನೆರವೇರಲಿದೆ ಎಂದರು.

ಸ್ಪೈರ್ ಕ್ಲಿನಿಕ್‌ನ ವೈದ್ಯ ಡಾ. ದೀಪಕ್ ಶಿವರಾತ್ರಿ ಮಾತನಾಡಿ 'ನಾವು ಈವರೆಗೆ ಮಂಡಿ ಮರು ಜೋಡಣೆ (ಟಿಕೆಆರ್), ಹಿಪ್-ರೀಪ್ಲೇಸ್ಮೆಂಟ್ ಜೊತೆಗೆ ಆರ್ಥೋಸ್ಕೋಪಿಯಂತಹ ಕ್ಲಿಷ್ಟಕರ ಶಸ್ತ್ರಚಿಕಿತ್ಸೆಯನ್ನೂ ನಡೆಸಿದ್ದೇವೆ. ಪ್ರಸ್ತುತ ಪ್ರತಿ ಗುರುವಾರ ಆರ್ಥೋಪೆಡಿಕ್ ಸೆಂಟರ್‌ನಲ್ಲಿ ಸಂದರ್ಶನ ಲಭ್ಯವಿದ್ದು ಬಿಪಿಎಲ್ ಕಾರ್ಡ್ ಹೊಂದಿರುವವರಿಗೆ ಸುಮಿತ್ರ ಮಹದೇವಪ್ಪ ಚಾರಿಟಬಲ್ ಟ್ರಸ್ಟ್ ವತಿಯಿಂದ ಉಚಿತ, ಎಪಿಎಲ್ ಕಾರ್ಡ್ ಹೊಂದಿದವರಿಗೆ ರಿಯಾಯಿತಿ ದರದಲ್ಲಿ ಶಸ್ತ್ರಚಿಕಿತ್ಸೆ ನಡೆಸಲಾಗುತ್ತಿದೆ' ಎಂದರು.

**ವಿಜಯವಾಣಿ ಸಹಯೋಗದಲ್ಲಿ ಪರಿಸರ ದಿನಾಚರಣೆ:** ಸಿದ್ಧಗಂಗಾ ಆಸ್ಪತ್ರೆ ಹಾಗೂ ವಿಜಯವಾಣಿ ದಿಗ್ವಿಜಯ ಸಹಯೋಗದಲ್ಲಿ ವಿಶ್ವ ಪರಿಸರ ದಿನ ಮಾಸಾಚರಣೆ ಅಂಗವಾಗಿ ಜೂನ್ ೧೧ ರಂದು, ಮಕ್ಕಳಿಗೆ ಸ್ಥಳದಲ್ಲಿಯೇ ಚಿತ್ರ ಬಿಡಿಸುವ ಸ್ಪರ್ಧೆಯನ್ನು ಸರ್ಕಾರಿ ಜೂನಿಯರ್ ಕಾಲೇಜು ಬಳಿಯ ಆಲದಮರದ ಪಾರ್ಕ್‌ನಲ್ಲಿ ಏರ್ಪಡಿಸಲಾಗಿತ್ತು. ಕಾರ್ಯಕ್ರಮವನ್ನು ಕೇಂದ್ರ ಲಲಿತಕಲಾ ಅಕಾಡೆಮಿ ಪ್ರಶಸ್ತಿ ಪುರಸ್ಕೃತ ಪ್ರಭು ಅರಸೂರು ಉದ್ಘಾಟಿಸಿದರು. ತುಮಕೂರು ನಗರ ಶಾಸಕ ಶ್ರೀ ಜ್ಯೋತಿ ಗಣೇಶ್, ಎಸ್ಪಿ ಶ್ರೀ ರಾಹುಲ್ ಕುಮಾರ್, ಪಾಲಿಕೆ ಸದಸ್ಯೆ ಶ್ರೀಮತಿ ಗಿರಿಜಾ, ಎಸ್ ಎಂಸಿಆರ್ ಐ ನ ಮೆಡಿಕಲ್ ಸೂಪರಿಂಟೆಂಡೆಂಟ್ ಡಾ. ನಿರಂಜನ್ ಮೂರ್ತಿ, ಸಿಇಓ ಶ್ರೀ ಸಂಜೀವ್ ಕುಮಾರ್ ಉಪಸ್ಥಿತರಿದ್ದರು.

ಅಂದು ಮಧ್ಯಾಹ್ನ ನಡೆದ ಸಮಾರೋಪ ಸಮಾರಂಭದಲ್ಲಿ ವಿಜೇತರಿಗೆ ಎಸ್‌ಎಂಸಿಆರ್‌ಐನ ಪ್ರಾಂಶುಪಾಲಾರದ ಡಾ.ಶಾಲಿನಿ ಬಹುಮಾನ ವಿತರಿಸಿದರು. ವಿಜಯವಾಣಿ ಜಿಲ್ಲಾವರದಿಗಾರ ಜಗನ್ನಾಥ್ ಕಾಳೇನಹಳ್ಳಿ, ಶ್ರೀಹರ್ಷ ಸೋಲರಮಾವು ಸರ್ಕ್ಯುಲೇಷನ್ ವಿಭಾಗದ ಶ್ರೀ ವೆಂಕಟೇಶ್, ಶ್ರೀ ಶಶಿಧರ್, ದಿಗ್ವಿಜಯ ವರದಿಗಾರ ಶ್ರೀ ಜಗದೀಶ್ ಮುಂತಾದವರು ಇದ್ದರು.

**ಮೆಡಿಕಲ್ ಕಾಲೇಜಿನ ಶಸ್ತ್ರಚಿಕಿತ್ಸೆಗಳು :** ಸಿದ್ಧಗಂಗಾ ಮೆಡಿಕಲ್ ಕಾಲೇಜಿನಲ್ಲಿ ಹಾವು ಕಡಿತಕ್ಕೆ ಒಳಗಾಗಿ





ಕೋಮಾಗೆ ಒಳಗಾಗಿದ್ದ ಬಾಲಕ ಹಾಗೂ ೭೫ ವರ್ಷದ ವೃದ್ಧನಿಗೆ ಯಶಸ್ವಿ ಚಿಕಿತ್ಸೆ ನಡೆಸಲಾಯಿತು. ಇನ್ನು ಸಂಧಿವಾತಕ್ಕೆ ಒಳಗಾಗಿದ್ದ ೭೫ ವರ್ಷದ ವೃದ್ಧಗೆ ಯಶಸ್ವಿ ಮಂಡಿ ಮರುಜೋಡಣೆ ನಡೆಸಲಾಯಿತು. ದೃಷ್ಟಿ ಸಮಸ್ಯೆಯಿಂದ ನಮ್ಮ ಆಸ್ಪತ್ರೆಗೆ ದಾಖಲಾಗಿದ್ದ ಪರಿಮಳ ಎಂಬುವವರು ಯಶಸ್ವಿ ಚಿಕಿತ್ಸೆಯಿಂದ ಗುಣಮುಖ ರಾದರು.

ಗ್ಯಾಸ್ಟಿಕ್ ಸಂಬಂಧಿಸಿದ ಸಮಸ್ಯೆ ಹೊಂದಿದ್ದ ೯ ವರ್ಷದ ವಿಕಲಚೇತನ ಮಗುವಿಗೆ ಶಸ್ತ್ರಚಿಕಿತ್ಸೆ ಅವಶ್ಯಕತೆ ಇತ್ತು. ಮೆಡಿಕಲ್ ಕಾಲೇಜು ಬ್ಲಾಕ್‌ನಲ್ಲಿ ಶೇ.೭೦ ರಷ್ಟು ರಿಯಾಯಿತಿಯಲ್ಲಿ ಶಸ್ತ್ರಚಿಕಿತ್ಸೆ ನಡೆಸಿ ಗುಣಮುಖನನ್ನಾಗಿ ಮಾಡಲಾಯಿತು.

**ಸಿದ್ಧಗಂಗಾ ವೈದ್ಯಕೀಯ ಕಾಲೇಜಿನಲ್ಲಿ ಯೋಗ ದಿನಾಚರಣೆ :** ಸಿದ್ಧಗಂಗಾ ಮೆಡಿಕಲ್ ಕಾಲೇಜು, ಫಾರ್ಮಸಿ,ನರ್ಸಿಂಗ್, ಪ್ಯಾರಾಮೆಡಿಕಲ್ ಕಾಲೇಜುಗಳ ಜಂಟಿ ಸಹಯೋಗದಲ್ಲಿ ಸಿದ್ಧಗಂಗಾ ಮೆಡಿಕಲ್ ಕಾಲೇಜು ಆವರಣದಲ್ಲಿ ಅಂತರಾಷ್ಟ್ರೀಯ ಯೋಗ ದಿನಾಚರಣೆ ನಡೆಯಿತು. ಯೋಗ ದಿನಕ್ಕೆ ಚಾಲನೆ ನೀಡಿ ಮಾತನಾಡಿ ಶ್ರೀ ಸಿದ್ಧಗಂಗಾ ಶಿಕ್ಷಣ ಸಂಸ್ಥೆಯ ಕಾರ್ಯದರ್ಶಿ ಶ್ರೀ ಟಿ.ಕೆ.ನಂಜುಂಡಪ್ಪನವರು 'ಯೋಗ ಜೀವನ' ನಿರಂತರವಾಗಿರಬೇಕು. ಯಾವ ಮನುಷ್ಯ ಯೋಗವನ್ನು ತನ್ನ ಉಸಿರುವರೆಗೂ ಮಾಡುತ್ತಾನೋ ಅಲ್ಲಿಯವರೆಗೂ ಆತನ ಮಾನಸಿಕ ಸ್ಥಿತಿ ಸಮತೋಲನವಾಗಿರುತ್ತದೆ ಎಂದು ಅಭಿಪ್ರಾಯಪಟ್ಟರು.

ಆಸ್ಪತ್ರೆ ನಿರ್ದೇಶಕ ಡಾ.ಎಸ್.ಪರಮೇಶ್ ಮಾತನಾಡಿ 'ಯೋಗದಿಂದ ಮನುಷ್ಯನ ಜೀವನ ಮತ್ತಷ್ಟು ಉತ್ಕೃಷ್ಟಗೊಳ್ಳುವುದಷ್ಟೇ ಅಲ್ಲದೆ, ಅತಃ ಶಕ್ತಿಯನ್ನೂ ಉಜ್ವಲಗೊಳಿಸಿ ಬದುಕಗೆ ದಾರಿದೀಪ ವಾಗುತ್ತದೆ. ರೋಗಮುಕ್ತ, ಶಕ್ತಿಯುತ ಜೀವನಕ್ಕೆ ಯೋಗ ರಹದಾರಿ' ಎಂದರು.

ಮೆಡಿಕಲ್ ಕಾಲೇಜು ಪ್ರಾಚಾರ್ಯರಾದ ಡಾ.ಶಾಲಿನಿ, ನರ್ಸಿಂಗ್ ಕಾಲೇಜು ಪ್ರಾಂಶುಪಾಲ ಡಾ.ಸುರೇಶ್ ಕುಲಕರ್ಣಿ, ಪ್ಯಾರಾಮೆಡಿಕಲ್ ಕಾಲೇಜು ಉಪಪ್ರಾಂಶು ಪಾಲರಾದ ಡಾ.ವೀಣಾಪರಮೇಶ್, ಸಿದ್ಧಗಂಗಾ ಮೆಡಿಕಲ್ ಕಾಲೇಜಿನ ಮೆಡಿಕಲ್ ಮೇಲ್ವಿಚಾರಕ ಡಾ.ನಿರಂಜನಮೂರ್ತಿ, ಸಿಇಓ ಶ್ರೀ ಸಂಜೀವ್ ಕುಮಾರ್ ಉಪಸ್ಥಿತರಿದ್ದರು. ಯೋಗ ತರಬೇತುದಾರರಾದ ಶ್ರೀಮತಿ ಸುಧಾ ಕೆ.ಎಸ್.ವಿನೋದ್ ಕುಮಾರ್, ಶ್ರೀ ಜಿ.ಎಂ.ಶಶಿಕುಮಾರ್ ಯೋಗ ತರಬೇತಿ ನೀಡಿದರು. ಸಮೂಹ ವೈದ್ಯಕೀಯ ಸಂಸ್ಥೆಗಳ ವಿದ್ಯಾರ್ಥಿ ಗಳು, ವೈದ್ಯರು ಹಾಗು ಸಿಬ್ಬಂದಿ ವರ್ಗದವರು ಉಪಸ್ಥಿತರಿದ್ದರು.

**ಔಷಧಗಳ ಅಡ್ಡಪರಿಣಾಮ ಉಸ್ತುವಾರಿ ಕೇಂದ್ರಕ್ಕೆ ಚಾಲನೆ :** ನಗರದ ಸಿದ್ಧಗಂಗಾ ಆಸ್ಪತ್ರೆಯಲ್ಲಿ ಸಿದ್ಧಗಂಗಾ ಫಾರ್ಮಸಿ ಕಾಲೇಜಿನ ಸಹಯೋಗದಲ್ಲಿ ಔಷಧಗಳ ಅಡ್ಡಪರಿಣಾಮಗಳ ಉಸ್ತುವಾರಿ ಕೇಂದ್ರವನ್ನು ಹುಬ್ಬಳ್ಳಿ ಕೆಎಲ್ ಇ ಕಾಲೇಜ್ ಆಫ್ ಫಾರ್ಮಸಿ ಕೇಂದ್ರದ ಸಂಯೋಜಕರಾದ ಡಾ.ಸನತ್ ಕುಮಾರ್ ಹಾಗೂ ಎಸ್‌ಎಂಸಿಆರ್‌ಐನ ಮೆಡಿಕಲ್ ಕಾಲೇಜು ಪ್ರಾಂಶುಪಾಲ ರಾದ ಡಾ.ಶಾಲಿನಿ, ಮೆಡಿಕಲ್ ಸೂಪರಿಂಟೆಂಡೆಂಟ್ ಡಾ.ಬಿ.ನಿರಂಜನಮೂರ್ತಿ, ಸಿದ್ಧಗಂಗಾ ಕಾಲೇಜ್ ಆಫ್ ಫಾರ್ಮಸಿಯ ಪ್ರಾಂಶುಪಾಲರಾದ ಡಾ.ಸುರೇಶ್ ಕುಲಕರ್ಣಿ ಉದ್ಘಾಟಿಸಿದರು. ಔಷಧಗಳ ಅಡ್ಡಪರಿಣಾಮ ಗಳ ವರದಿ ಕುರಿತು ಮುಖ್ಯ ಸಂಚಾಲಕರಾದ ಶ್ರೀ ರವಿನಂದನ್ ಎಪಿ ಮಾತ ನಾಡಿದರು.

ಇನ್ನು ನೂತನ ವಿಭಾಗದ ಚಾಲನೆಯ ಭಾಗವಾಗಿ ಫಾರ್ಮಾಕೋವಿಜಿಲೆನ್ಸ್ ವಿಷಯದ ರಾಷ್ಟ್ರೀಯ ಮಟ್ಟದ ಕಾರ್ಯಾಗಾರ ನಡೆಯಿತು. ಡಾ.ರಿಸ್ಮಾ ಅಬ್ರಹಾಂ, ಡಾ.ಮೊಹಮದ್ ಮುಸ್ತಫಾ,ಜಿ. ಡಾ.ಕಾವ್ಯ, ಡಾ.ಪ್ರಶಾಂತ್ ಸೇರಿದಂತೆ ಕಾರ್ಯಕ್ರಮದಲ್ಲಿ ರಾಜ್ಯದ ಸುಮಾರು೭ ಕ್ಕೂ ಹೆಚ್ಚಿನ ೨೦೦ ಫಾರ್ಮಸಿ ವಿದ್ಯಾರ್ಥಿಗಳು ಹಾಗೂ ಶಿಕ್ಷಕರು ಹಾಜರಿದ್ದರು.

**ಸಿದ್ಧಗಂಗಾ ಆಸ್ಪತ್ರೆಯಿಂದ ನಡೆದ ಕ್ಯಾಂಪ್‌ಗಳ ವಿವರ :**

ಜೂನ್ ೫ ರಂದು, ವಿಶ್ವಪರಿಸರ ದಿನದ ಅಂಗವಾಗಿ ಸಿದ್ಧಗಂಗಾ ಮೆಡಿಕಲ್ ಕಾಲೇಜು ಆವರಣದಲ್ಲಿ ಗಿಡ ನಡುವ ಮೂಲಕ ಪರಿಸರ ಜಾಗೃತಿ ಮೂಡಿಸಲಾಯಿತು.







ಸಿದ್ಧಗಂಗಾ ಆಸ್ಪತ್ರೆಯ ನಿರ್ದೇಶಕ ಡಾ.ಎಸ್.ಪರಮೇಶ್, ಮೆಡಿಕಲ್ ಕಾಲೇಜು ಪ್ರಾಂಶುಪಾಲರಾದ ಡಾ.ಶಾಲಿನಿ ಸೇರಿದಂತೆ ಆಸ್ಪತ್ರೆ ಸಿಬ್ಬಂಧಿ ಉಪಸ್ಥಿತಿರಿದ್ದರು.

ಜೂನ್ ೬ ರಂದು, ಆರೋಗ್ಯ ತಪಾಸಣಾ ಶಿಬಿರಗಳ ಜೊತೆಗೆ ವಾರಾಂತ್ಯದಲ್ಲಿ ವಾಯುವಿಹಾರಿಗಳಿಗಾಗಿಯೇ ವಿಶೇಷ ಆರೋಗ್ಯ ತಪಾಸಣೆ ನಡೆಸುತ್ತಿದ್ದು; ಪ್ರವಾಸಿ ತಾಣ ನಾಮದಚಿಲುಮೆಯಲ್ಲಿ ಆರೋಗ್ಯ ತಪಾಸಣೆ ನಡೆಸಲಾಯಿತು

ಜೂನ್ ೧೧ ರಂದು, ಸಿದ್ಧಗಂಗಾ ಆಸ್ಪತ್ರೆ ಹಾಗೂ ಧಾನ್ ಫೌಂಡೇಶನ್ ಸಹಯೋಗದಲ್ಲಿ ನಗರದ ಚಿಕ್ಕಪೇಟೆಯ ಜಿಸಿಎಸ್ ಕಾಲೋನಿಯಲ್ಲಿ ಮಹಿಳೆಯ ಆರೋಗ್ಯ ಕಾಳಜಿ ಕುರಿತು ನಮ್ಮ ಆಸ್ಪತ್ರೆಯ ಕಮ್ಯುನಿಟಿ ಮೆಡಿಸಿನ್ ವೈದ್ಯರಾದ ಡಾ.ಅನುಪಮಾ ಸಾರ್ವಜನಿಕರಿಗೆ ಆರೋಗ್ಯ ಅರಿವು ಮೂಡಿಸಿದರು. ಧಾನ್ ಫೌಂಡೇಷನ್‌ನ ಶ್ರೀಮತಿ ಮಂಜುಳಾ, ತ್ರಿವೇಣಿ, ಭಾಗ್ಯಮ್ಮ, ಆಸ್ಪತ್ರೆಯ ಪಿಆರ್‌ಓ ವಿಭಾಗದ ಶ್ರೀ ಶರತ್ ಕುಮಾರ್ ಹಾಗೂ ಸಿಬ್ಬಂದಿ ಉಪಸ್ಥಿತರಿದ್ದರು.

ಜೂನ್ ೧೪ ರಂದು, ಆಸ್ಪತ್ರೆ ವತಿಯಿಂದ ಆಸ್ಪತ್ರೆಯ ರಕ್ತನಿಧಿಯಿಂದ ನಡೆದ ರಕ್ತ ದಾನಿಗಳ ದಿನದ ಅಂಗವಾಗಿ ಆಸ್ಪತ್ರೆಯ ಮುಖ್ಯ ವೈದ್ಯರು ಹಾಗೂ ಆಡಳಿತ ಪ್ರಮುಖರೇ ರಕ್ತದಾನ ನಡೆಸುವ ಮೂಲಕ ಮಾದರಿಯಾಗಿದ್ದಾರೆ. ಸಿದ್ಧಗಂಗಾ ಆಸ್ಪತ್ರೆ ನಿರ್ದೇಶಕ ಡಾ.ಎಸ್.ಪರಮೇಶ್, ಮೆಡಿಕಲ್ ಸೂಪರಿಂಟೆಂಡೆಂಟ್ ಡಾ.ನಿರಂಜನಾರಾಧ್ಯ, ಜನರಲ್ ಸರ್ಜರಿ ಸ್ಪೆಷಲಿಸ್ಟ್ ಡಾ.ಚಂದ್ರಶೇಖರ್ ರಕ್ತದಾನ ಮಾಡಿದರು. ಜಿಲ್ಲಾ ಶಸ್ತ್ರಚಿಕಿತ್ಸಕರಾದ ಡಾ. ಡಿ.ಎಸ್. ವೀರಭದ್ರಯ್ಯ ಆಸ್ಪತ್ರೆಗೆ ಆಗಮಿಸಿ ದಾನಿಗಳಿಗೆ ಪ್ರಮಾಣಪತ್ರ ವಿತರಿಸಿದರು. ಡಾ.ಮೋಹನ್ ದಾಸ್, ಡಾ.ಕೇಶವ್ ರಾಜ್, ರಕ್ತನಿಧಿ ವಿಭಾಗದ ಯಶೋಧರ ಇದ್ದರು.

ಜೂನ್ ೧೭ ರಂದು, ನಗರದ ಹಿರೇಹಳ್ಳಿ ಸರ್ಕಾರಿ ಶಾಲೆ ಆವರಣದಲ್ಲಿ ಸಿದ್ಧಗಂಗಾ ಆಸ್ಪತ್ರೆ ಪ್ರೋಕನೆಕ್ಟ್ ಇಂಟಿಗ್ರೇಟೆಡ್‌ಲಾಜಿಸ್ಟಿಕ್ ಸಂಸ್ಥೆಯ ಸಹಯೋಗದಲ್ಲಿ ಬೃಹತ್ ಆರೋಗ್ಯ ಶಿಬಿರ ನಡೆಸಲಾಯಿತು. ಕಾರ್ಯಕ್ರಮದಲ್ಲಿ ೨೦೦ ಕ್ಕೂ ಹೆಚ್ಚು ಸಾರ್ವಜನಿಕರಿಗೆ ಆರೋಗ್ಯ ತಪಾಸಣೆ ನಡೆಸಲಾಯಿತು. ಗ್ರಾಪಂ ಸದಸ್ಯ ತನ್ವೀರ್ ರೆಹಮಾನ್ ಖಾನ್ ಕಾರ್ಯಕ್ರಮದ ನೇತೃತ್ವ ವಹಿಸಿದ್ದರು. ಪಿಡಿಓ ಶ್ರೀಮತಿ ಲತಾ ಶಿಬಿರದಲ್ಲಿ ಪಾಲ್ಗೊಂಡರು.

ಜೂನ್ ೧೯ ರಂದು, ಸಿದ್ಧಗಂಗಾ ಆಸ್ಪತ್ರೆ ವತಿಯಿಂದ ಶಿರಾ ಗೇಟ್‌ನಲ್ಲಿರುವ ಕಾಳಿದಾಸ ನಗರದಲ್ಲಿ ಉಚಿತ ಆರೋಗ್ಯ ತಪಾಸಣೆ ನಡೆಸಲಾಯಿತು.ಆಸ್ಪತ್ರೆಯ ಸಿಬ್ಬಂದಿಗಳಾದ ನಂದುಶ್ರೀ, ಪಲ್ಲವಿ, ಸಾರ್ವಜನಿಕ ಸಂಪರ್ಕ ವಿಭಾಗದ ಶಿವಕುಮಾರ್ ಮುಂತಾದವರಿದ್ದರು.

ಜೂನ್ ೨೪ ರಂದು, ಸಿದ್ಧಗಂಗಾ ಆಸ್ಪತ್ರೆ ಹಾಗೂ ಧಾನ್ ಫೌಂಡೇಶನ್ ಸಹಯೋಗದಲ್ಲಿ ನಗರದ ಸಿರಾ ಗೇಟ್ ಬಳಿಯ ಧಾನ್ ಫೌಂಡೇಶನ್ ಕಚೇರಿಯಲ್ಲಿ ಮಹಿಳೆಯ ಆರೋಗ್ಯ ಕಾಳಜಿ ಕುರಿತು ಸಿದ್ದಗಂಗಾ ಮೆಡಿಕಲ್ ಕಾಲೇಜಿನ ಪ್ರಾಂಶುಪಾಲರಾದ ಡಾ. ಶಾಲಿನಿ ಸಾರ್ವಜನಿಕರಿಗೆ ಆರೋಗ್ಯದ ಬಗ್ಗೆ ಅರಿವು ಮೂಡಿಸಿದರು. ಧಾನ್ ಪೌಂಡೇಷನ್‌ನ ಶ್ರೀಮತಿಯರಾದ ಮಂಜುಳಾ, ತ್ರಿವೇಣಿ, ಭಾಗ್ಯಮ್ಮ, ಆಸ್ಪತ್ರೆಯ ಪಿಆರ್‌ಓ ವಿಭಾಗದ ಶ್ರೀ ಶಿವಕುಮಾರ್ ಹಾಗೂ ಸಿಬ್ಬಂದಿ ಉಪಸ್ಥಿತರಿದ್ದರು

ಜೂನ್ ೨೪ ರಂದು, ಸಿದ್ಧಗಂಗಾ ಆಸ್ಪತ್ರೆ ಹಾಗೂ ಧಾನ್ ಫೌಂಡೇಶನ್ ಸಹಯೋಗದಲ್ಲಿ ಕೊರಟಗೆರೆಯ ಅಲುಪ್ಪನಹಳ್ಳಿಯಲ್ಲಿ ಉಚಿತ ಅರೋಗ್ಯ ತಪಾಸಣಾ ಶಿಬಿರ ನಡೆಸಲಾಯಿತು, ಶಿಬಿರದಲ್ಲಿ ೧೫೦ ಕ್ಕೂ ಹೆಚ್ಚು ಸಾರ್ವಜನಿಕರಿಗೆ ಆರೋಗ್ಯ ತಪಾಸಣೆ ಮಾಡಲಾಯಿತು,

ಜೂನ್ ೨೫ ರಂದು, ಗುಡೇಮಾರನಹಳ್ಳಿಯ ಸಿದ್ದಗಂಗಾ ಸರ್ಕಾರಿ ಪದವಿಪೂರ್ವ ಕಾಲೇಜು ಆವರಣದಲ್ಲಿ ಸಿದ್ಧಗಂಗಾ ಆಸ್ಪತ್ರೆಯ ಸಹಯೋಗದಲ್ಲಿ ಬೃಹತ್ ಆರೋಗ್ಯ ಶಿಬಿರ ನಡೆಸಲಾಯಿತು. ಕಾರ್ಯಕ್ರಮದಲ್ಲಿ ೨೫೦ಕ್ಕೂ ಹೆಚ್ಚು ಸಾರ್ವಜನಿಕರಿಗೆ ಆರೋಗ್ಯ ತಪಾಸಣೆ ನಡೆಸಲಾಯಿತು.

ಕಾರ್ಯಕ್ರಮದಲ್ಲಿ ನೆಲಮಂಗಲ ಶಾಸಕ ಡಾ. ಕೆ ಶ್ರೀನಿವಾಸ್ ಮೂರ್ತಿ, ಮಾಗಡಿ ಶಾಸಕ ಶ್ರೀ ಈ. ಮಂಜುನಾಥ್, ಸಿದ್ದಗಂಗಾ ಆಸ್ಪತ್ರೆಯ ವ್ಯವಸ್ಥಾಪಕ ನಿರ್ದೇಶಕ ಡಾ. ಎಸ್ ಪರಮೇಶ್, ಮಾಜಿ ಜಿಲ್ಲಾ ಪಂಚಾಯತ್ ಸದಸ್ಯರಾದ ಶ್ರೀ ಶಿವರುದ್ರಯ್ಯ, ಸಮಾಜಸೇವಕ ಶ್ರೀ ಮಂಜುನಾಥ್, ಸಿದ್ದಗಂಗಾ ಪಿಯು ಕಾಲೇಜಿನ ಪ್ರಾಂಶುಪಾಲರಾದ ಶ್ರೀ ಜಗದೀಶ್ ಉಪಸ್ಥಿತರಿದ್ದರು.

**ವರದಿ : ಕಾಂತರಾಜು, ಪಿಆರ್‌ಓ, ಸಿದ್ಧಗಂಗಾ ಆಸ್ಪತ್ರೆ**







## ನೆನಪಿನಂಗಳದಿಂದ

# ಮರಣವೇ ಮಹಾನವಮಿ [ಜೀವನಶೈಲಿಯೇ ಆರೋಗ್ಯ]

– ಪ್ರೊ. ಜಿ.ಎಚ್. ಹನ್ನೆರಡುಮಠ *

ಆ ಅಜ್ಜಿ ಬೆಲ್ಲದ ಮಿಜ್ಜಿ !

ಒಂದು ದಿನ ಬಚ್ಚಲದಲ್ಲಿ ಜಾರಿ ಬಿದ್ದದ್ದೇ ತಪ್ಪಾಯಿತು. ಮೂರ್ಛೆ ಹೋದ ಅವಳನ್ನು ಹೈಟೆಕ್ ಹಾಸ್ಪಿಟಲಿಗೆ ದಾಖಲಿಸಲಾಯಿತು. ಅಂದಿನಿಂದ ಐಸಿಯೂ ಸುಖನಿವಾಸಿಯಾದಳು. ದಿನಕ್ಕೆ ಸಾವಿರ-ಸಾವಿರ ವೆಚ್ಚ. ಈ ಬಲಂಡ ಖರ್ಚಿನೊಂದಿಗೆ ಎರಡು ತಿಂಗಳ ಕಾಲವೇ ಕಳೆಯಿತು. ತರುವಾಯ ಆ ಅಜ್ಜಿಯನ್ನು ಅಂತಿಮ ಘಟ್ಟದಲ್ಲಿ ಆಸ್ಪತ್ರೆಯಿಂದ ಮನೆಗೆ ಕಳಿಸಲಾಯಿತು. ದಾರಿಯಲ್ಲಿಯೇ ಅಜ್ಜಿ ಮಕ್ಕಳ ಮೇಲೆ ಖರ್ಚಿನ ಕುಳಬಾನ ಒಟ್ಟಿ, ಕಾಲನ ಕಡೇಗಂಟೆ ಬಾರಿಸಿದಳು!

ಇಂಥ ಒಂದಲ್ಲ.... ನೂರು ನೂರು ಹಕೀಕತ್ತುಗಳನ್ನು ನಾವು ಕೇಳುತ್ತಲೇ ಇರುತ್ತೇವೆ. ಇನ್ನೋರ್ವಳು ಮಹಾತಾಯಿ ಅಕ್ಷರಶಃ ಹಾಸಿಗೆ ಹಿಡಿದಳು. ನಾಲ್ವರು ಮಕ್ಕಳು. ಆ ಮಕ್ಕಳೂ ವೃದ್ಧಾಪ್ಯದ ದಾರಿ ಹಿಡಿದಿದ್ದರು. ಆ ಅಜ್ಜಿಯ ಆರೈಕೆಯನ್ನು ಪ್ರತಿ ಮೂರು ತಿಂಗಳಿಗೆ ಒಬ್ಬರಂತೆ ಹಿಸೆ ಮಾಡಿ ಹಂಚಿಕೊಂಡರು. ಈ ಯಾತನೆ ಸತತ ಆರು ವರ್ಷ ನಡೆಯಿತು. ಟೈಮ್‌ಟೇಬಲ್ ಪ್ರಕಾರ ಅಜ್ಜಿಯನ್ನು ಮುಂದಿನ ಮನೆಗೆ ಕಳಿಸುತ್ತ ಬಂದರು. ಎಲ್ಲರೂ ಹೈರಾಣಾಗಿ ಹಂಚಿಬಿಲ್ಲಿ ಆದಾಗ, ಕಟ್ಟಕಡೆಗೆ ಆ ಅಜ್ಜಿಯ ಸೇವೆ ಮಾಡಿದ ಇಬ್ಬರು ಸೊಸೆಯಂದಿರೂ ಸತ್ತ ಮೇಲೆ, ಆ ಮುದ್ದು ಅಜ್ಜಿ ಮಜ್ಜಿಗೆ ಕುಡಿದು ಹೋಗಿಬಿಟ್ಟಳು !

ಇತ್ತೀಚೆಗೆ ೩೦-೪೦ ವರ್ಷಗಳಲ್ಲಿ ನಮ್ಮ ಜೀವನಶೈಲಿ ಚಾಪಿಯಿಂದ ಪಲ್ಲಂಗಕ್ಕೆ ಬಂದು, ಪಲ್ಲಂಗದಿಂದ ದಮ್ಮದಮ್ಮ ದಿಂಬಿನ ಆಸನಕ್ಕೆ ಬಂದು, ಕುಂತಲ್ಲೇ ಕೊಳೆತು ಹೋಗತೊಡಗಿತೋ ಏನೋ ?

ಇದು..... ಎಂದೆಂದಿಗೂ ಹೀಗೆಯೇ ಇತ್ತೇ?

ಊಹುಂ.... ಇದಕ್ಕೆ ಎರಡು ಪ್ರತ್ಯಕ್ಷ ನಿದರ್ಶನಗಳು ಹೂಬೇಹೂಬಾಗಿ ಇವೆ. ಇಲ್ಲಿ ಕೇಳಿರಿ....

ನನ್ನ ಅಜ್ಜ ೧೦೫ ವರ್ಷದವರೆಗೆ ಎರಡು ಹೊತ್ತು ಸಜ್ಜಕ್ಕ ಉಣ್ಣುತ್ತ, ಊಟ ಮಾಡುತ್ತಲೇ ಹೋಗಿಬಿಟ್ಟ. ಅವನ ಹಳ್ಳಿಯ ಅಗಸೀ ಬಾಗಲಕ್ಕೆ ಕೂಡಾ ಸಕ್ರೀ ಜಡ್ಡು, ದಮ್ಮಿನ ಕಸಾರ್ಕಿ ಬರಲೇ ಇಲ್ಲ. ದಿನಾಲೂ ನಾಲ್ಕು ಮೈಲು ದೂರದ ಹೊಲಕ್ಕೆ ನಡೆಯುತ್ತಲೇ ಹೋಗಿ, ಅಲ್ಲಿ ಎಂಟೊಂಬತ್ತು ವ್ಯಾಳೇವು ದಣೇರ ದಣಿಕಿ ಮಾಡಿ ಮತ್ತೆ ನಾಲ್ಕು ಮೈಲು ನಡೆಯುತ್ತಲೇ ಮನೆಗೆ ಬಂದು, ಬುಟ್ಟಿರೊಟ್ಟಿ ಬರೇದು ಮಾಡಿ ನೆಟ್ಟಗೇ ಮಲಗಿದರೆ, ಅವನ ಮೈಮೇಲೆ ಹಾವು ಹರಿದಾಡಿದರೂ ಎಚ್ಚರ ಆಗುತ್ತಿರಲಿಲ್ಲ.

ಒಮ್ಮೆ ನಡರಾತ್ರಿಯಲ್ಲಿ ಒಂದು ಕೆಂಪು ಚೇಳು ಕಡಿದರೂ; ಅದನ್ನು ಕೈಯಿಂದಲೇ ಕೊಸರಿ ಒಗೆದು, ಮತ್ತೆ ಗೊರಗೊರ ನಿದ್ದೆ ಮಾಡಿದ ಪುಣ್ಯಾತ್ಮ !

ಅಬ್ಬಾಬ್ಬಾ.... ನೀವು ನಂಬಲೂ ಸಾಧ್ಯವಿಲ್ಲದ ನನ್ನ ಶತಾಯುಷಿ ಅಜ್ಜಿಯ ಕಥೆ ಕೇಳಿರಿ. ಅವಳು ಯಾವುದೇ ಚುಂಗುಚೂರು ಬ್ಯಾನಿ-ಬ್ಯಾಸರ್ಕಿ ಇಲ್ಲದೇ ತುಂಬು ಜೀವನ ಬಾಳಿ ಹವ್ವನೇ ಹಾರಿ ಹೋದಳು. ಅವಳದು "ಮೆಥೆಮೆಟಿಕಲ್ ಡೆತ್" !

ಸಾಯುವುದು ಇನ್ನು ಮೂರು ತಿಂಗಳು ಇದ್ದಾಗ ಅವಳು ನಮಗೆ.... "ಇನ್ನು ಮೂರು ತಿಂಗ್ಳೀಗೆ ನಾ ಈ ಶರೀರಾ ಬಿಡ್ತೇನಿ...." ಅಂತ ಹೇಳಿದಳು.

ನಾವೆಲ್ಲರೂ ಕುಂಬಳಕಾಯಿ ನಕ್ಕಂತೆ ನಕ್ಕೆವು.

ಸಾಯುವುದು ಇನ್ನು ಒಂದು ತಿಂಗಳು ಇದ್ದಾಗ ಅವಳು ನಮಗೆ.... "ನಾ ಸಾಯೂದು ಇನ್ನ ಒಂದು ತಿಂಗ್ಳ ಉಳೀತು" ಅಂದಳು.

ನಾವು ಗುಳ್ಳೆಡಿಕಿ ಉಂಡಿ ತಿಂದಂತೆ ಗುಳುಗುಳು ನಕ್ಕೆವು.

* # ೫, "ಮಾವು ಮಲ್ಲಿಗೆ", ಇಂದ್ರಪ್ರಸ್ಥ ಕಾಲೋನಿ, ಬನ್ನೇರುಘಟ್ಟದ ರಸ್ತೆ, ಗೊಟ್ಟಿಗೆರೆ ಅಂಚೆ, ಬೆಂಗಳೂರು





ಅವಳು ಸಾಯುವುದು ಇನ್ನು ಒಂದುವಾರ ಇದ್ದಾಗ ಹೇಳಿದಳು..... "ಇನ್ನ ಏಳ ದಿನಾ ಉಳೀತು ನಾ ಸಾವೂದು. ಬರೂ ಸೋಮಾರದಿನಾ ನನ್ನ ಕುಣಿ. ಬೆಂಗಳೂರಿಗೆ ಮಗಳಿಗೆ ತಿಳಿಸಿ ಕರಸ್ರಿ...."!

ನಾವು ಆಗಲೂ ಮುಳಗಾಯಿ ಪಲ್ಲೆ ತಿಂದಂತೆ ಮುಳುಮುಳು ನಕ್ಕೆವು.

ಸಾಯುವುದು ಮೂರು ದಿನಾ ಇದ್ದಾಗ ಅವಳು ಹೇಳಿದಳು –

"ಇನ್ನ ಮೂರದಿನಾ ಉಳೀತು ನಾ ಹೋಗೂದು. ನಾ ಸತ್ತಾಗ ಯಾರೂ ಅಳಬ್ಯಾಡ್ರಿ...." ಅಂದಳು. ಆಗ ನಾವು ಫಾಬರಾಸಿಯಾಗಿ ಕೇಳಿದೆವು.... "ಯಾಕಬೇ.... ಯಾಕ ಅಳಬಾರ್ದು?" ಅಂತ ತಿರಿಸೆಟ್ಟಿ ಕುಚಾಸ್ಕೀ ಮಾಡಿದಾಗ ಅವಳು.... "ಸತ್ತಾಗ ಅತ್ರ.... ಈ ಆತ್ಮಾ ಬಂದಿತ ಆಗತೈತಿ. ದೆವ್ವಾ ಆಗತೈತಿ. ಮುಂದಿನ ಜನ್ಮಕ್ಕ ದಾರಿ ಸಿಗಂಗಿಲ್ಲಾ...." ಅಂದಳು.

ಅವಳು ಸಾಯುವುದು ಇನ್ನು ಒಂದು ದಿನಾ ಇದ್ದಾಗ – "ನಾಳೆ ನನ್ನ ಕಡೇ ದಿನಾ. ನನ್ನ ಹೆಣಕ್ಕ ಮದ್ಯಾಣಕ್ಕ ಮಣ್ಣ ಕೊಡ್ರಿ, ಯಾಕಂದ್ರ ಪರವೂರಿಂದ ಬಂದೋರಿಗೆ ವಾಪಸ್ಸು ತಮ್ಮ ತಮ್ಮ ಊರೀಗೆ ಹೊಳ್ಳಿ ಹೋಗಾಕ ಅನುಕೂಲ ಆಗತೈತಿ...." ಅಂದಳು.

ನಂತರ ಸಾಯುವ ಸೋಮಾರದ ದಿನ ಬಂತು ! ಅವಳು ನಮಗೆಲ್ಲಾ.... "ನೀವು ಇವತ್ತ ಗಟ್ಟಿಮುಟ್ಟ ಉಂಡಕುಂಡರ್ರಿ. ನಂತ್ರ ನೀವು ಯಾವಾಗೋ ಏನೋ ಉಣ್ಣೂದು...." ಅಂದಳು. ನಾವೆಲ್ಲಾ "ಹಂಗ್ಯಾಕಬೇ?" ಅಂತ ಕೇಳೀದ್ರ.... "ಇವತ್ತಿನ ಊಟಾ ಬ್ಯಾರೇ ಊಟಾ...." ಅಂದಳು.

ಸಾಯುವದು ಐದು ಮಿನಿಟು ಇದ್ದಾಗ ಮೊಮ್ಮಗಳಿಗೆ.... "ಗಂಟ್ಲಾ ಆರಾಕತ್ತೈತಿ. ನೀರು ಕೊಡು" ಅಂದಳು. ಮೊಮ್ಮಗಳು – "ತಡಿ ಯಮ್ಮಾ.... ನೀರ ತಣ್ಣ ಅದಾವು. ಕಾಸಗೊಂಡ ಬರತೇನಿ" ಅಂದಳು. ಅದಕ್ಕೆ ಅವಳು – "ಸಾವೂ ಜೀವಕ್ಕ ತಣ್ಣೀರೇನೂ.... ಬಿಸಿನೀರೇನೂ.... ಹಾಕು ಬಾಯಾಗ...." ಅಂದಳು.

ಮೊಮ್ಮಗಳು ಬಾಯಿಗೆ ನೀರು ಹಾಕಿದ್ದೊಂದೇ ತಡ ಅಜ್ಜಿ ಮನೆಯಿಂದ ಹೊಲಕ್ಕೆ ಹೋದಂತೆ ಹಳವಾರಾಗಿ ಕಡೇಬಾರಿಗೆ ಹೊಂಟು ಹೋದಳು !!

ಇಂಥ ಜನರು ಉತ್ತರ ಕರ್ನಾಟಕದ ಹಳ್ಳಿಗಳಲ್ಲಿ ಒಂದು ಕಾಲಕ್ಕೆ ಮನೆಮನೆಗೂ ಇದ್ದರು. ಪ್ರತಿಯೊಬ್ಬರ ಸಾವೂ ಅರ್ಥಪೂರ್ಣವಾಗಿತ್ತು. ಸಾವಿನ ಎಡಬಲಗಳಲ್ಲಿ ಸುತ್ತಾಡಿ ಬಂದವರೆಷ್ಟೋ ! ಬ್ಯಾನಿ-ಕಸಾರ್ಕಿಯಿಂದ ಕೊಳೆತು ಹೋಗುತ್ತಿರಲಿಲ್ಲ. ಕಡೆತನಕ ಮಾತಾಡುತ್ತಲೇ ಸಾಯುತ್ತಿದ್ದರು.

ಅವರು ಹಾವು ಸವದಂತೆ ಸವಕೊಂಡ ಹೋಗುತ್ತಿದ್ದರೆಂದು ಹುಬ್ಬಳ್ಳಿಯ ೧೦೩ ವರ್ಷಗಳ ನನ್ನ ತಾಯಿ ಹೇಳುತ್ತಿದ್ದಳು. ನನ್ನ ತಾಯಿಯೂ ಜಡ್ಡು-ಪಾಪತ್ರಿ ಇಲ್ಲದ ಬಿಲಪತ್ರಿ ಮರವಾಗಿದ್ದಳು ! ಅವಳ ಕಂಠ ಸಿದ್ಧಾರೂಢ ಮಠದ ಗಂಟೆಯಾಗಿತ್ತು !!

ಬಿಸಿಲು ಮಳೆ ಗಾಳಿ ಚಳಿಗಳಲ್ಲಿ ನುಗ್ಗುನುರಿಯಾಗಿ ಯಗ್ಗಿಲ್ಲದೇ ದುಡಿಯುತ್ತಿದ್ದ ಜನ ಅವರು. ಹಸದಾಗ ನುಚ್ಚು – ಕೈರೊಟ್ಟಿ – ಪುಂಡೀಪಲ್ಲೆ – ನವಣಕ್ಕಿ ಅನ್ನ – ಕೆನಿಮಸರು – ಮೆಣಸಿಂಡಿ – ಬಳ್ಳೊಳ್ಳಿ ಚಟ್ಣಿ – ಕರಿಂಡಿ ಅವರ ಊಟವಾಗಿತ್ತು. ಹಬ್ಬದ ದಿನ ಗಂಗಾಳತುಂಬ ಗೋದಿಹುಗ್ಗಿ-ತುಪ್ಪ ಹೊಟ್ಟಿಯ ಗುಳಬುಟ್ಟಿ ತುಂಬಲೇಬೇಕು.

ನಂತರದ ನಮ್ಮ ದಿನಮಾನಗಳು ದಿಢೀರನೇ ಬದಲಾಗಿ.... ನಮ್ಮ ಅಡಗಿ ಮನೆಗೆ ಪಾಲೀಸ ಮಾಡಿದ ಯಂತ್ರದ ಅಕ್ಕಿ, ಮೈದಾ, ಕೃತ್ರಿಮ ಎಣ್ಣೆ, ಇಡ್ಲಿ, ದೋಸೆ, ಅವಲಕ್ಕಿ, ಉಪ್ಪಿಟ್ಟು, ಚಹಾ, ಕಾಫಿ, ರೆಡಿ ಫುಡ್‌ಗಳು ಗುಡ್ಡದಂತೆ ಬಂದವು. ಸ್ಯಾವಿಗಿ ಹೋತು; ಸ್ಯಾಂಡವಿಚ್ಚು ಬಂತು, ರಾಗಿ ಹೋತು, ಬೋಂಡಾ ಬಂತು. ಜೋಳ ಉಂಡು ತೋಳವಾಗುವ ಜನ ಮ್ಯಾಗಿ ಮಾನಿನಿಯ ಕೈಹಿಡಿದರು.

ಒಂದು ಕಾಲಕ್ಕೆ ಉಳವಿ – ಶ್ರೀಶೈಲ – ಪಂಢರಾಪುರ – ಬನಶಂಕರಿ – ಕೂಡಲಸಂಗಮ – ಕಾಶಿ – ಕೇದಾರಗಳಿಗೆ ನಡೆಯುತ್ತಲೇ ಹೋಗಿ ಬರುವ ಜನ ಈಗ ಹತ್ತು ಹೆಜ್ಜೆ ಹೋಗಲೂ ಕಾರು-ಸ್ಕೂಟರು-ಬಸ್ಸು ಹತ್ತುತ್ತಾರೆ. ಬೊಜ್ಜು ಎಲ್ಲರ ಅಖಂಡ ಆಸ್ತಿ ಆತು. ದುಡಿಮೆಯೇ ಸುಖ ಎಂಬ ಕಾಲ ಬದಲಾಗಿ ಈಜೀಯಾಗಿ; ಈಜೀಚೇರ ಶೈಲಿಯ ಬದುಕು ಜನಪ್ರಿಯವಾಯಿತು. ಸಾಫ್ಟ್‌ವೇರ್ ಬಂದು ವಿಮಾನ ಶೈಲಿಯ ಹೈಫೈ ಜೀವನ ಹೈಜಂಪ ಮಾಡಿ ಬಂತು.

ಶರಣರು ಸಾರಿದ "ಮರಣವೇ ಮಹಾನವಮಿ".... ಇದೇ ಜೀವನ ಕಲೆಯ ಪರಮಾದ್ಭುತ ಮಾನದಂಡ ! ಒಂದು ಕಾಲಕ್ಕೆ ಇಚ್ಛಾಮರಣಿಗಳು ಇದ್ದರಂತೆ. ಆದರೆ ಇಂದಿನ ಸ್ವೇಚ್ಛಾಮರಣಗಳ ಸಿಥಿಲ ಸಂತಿಯಲ್ಲಿ ಆ ಕಾಲ ನಂಬಲೂ ಆಗುತ್ತಿಲ್ಲ !!

**ಆ ಜೀವನ ಸಂಸ್ಕೃತಿ ಜಾರಿ ಹೋತು ! ಈ ಸಾವಿನ ವಿಕೃತಿ ತೂರಿ ಬಂತು !**





# ಶ್ರೀ ಹೆಚ್.ವಿ. ಕೀರ್ತಿಪ್ರಕಾಶ್ ವಿಧಿವಶ



ಶ್ರೀ ಸಿದ್ಧಗಂಗಾ ಫಾರ್ಮಸಿ ಕಾಲೇಜಿನಲ್ಲಿ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸುತ್ತಿದ್ದ ಶ್ರೀ ಹೆಚ್.ವಿ. ಕೀರ್ತಿಪ್ರಕಾಶ್ ಅವರು ಪರೀಕ್ಷಕರಾಗಿ ಕರ್ತವ್ಯದ ಮೇಲೆ ಗುಲ್ಬರ್ಗಾಕ್ಕೆ ಹೋಗಿದ್ದಾಗ, ಜುಲೈ ೧೦ ರಂದು ಹೃದಯಾಘಾತದಿಂದ ವಿಧಿವಶರಾದರೆಂದು ತಿಳಿಸಲು ಸಿದ್ಧಗಂಗಾ ವಿಷಾದಿಸುತ್ತದೆ. ಅವರಿಗೆ ೫೧ ವರ್ಷವಾಗಿತ್ತು.

ಜುಲೈ ೨, ೧೯೭೧ ರಂದು ತುಮಕೂರಿನಲ್ಲಿ ಜನಿಸಿದರು. ತಂದೆ ನಿವೃತ್ತ ಪ್ರಾಧ್ಯಾಪಕರು, ಸಿದ್ಧಗಂಗಾ ಮಾಸಪತ್ರಿಕೆ ಪ್ರಧಾನ ಸಂಪಾದಕರಾದ ಪ್ರೊ. ಹೆಚ್.ವಿ. ವೀರಭದ್ರಯ್ಯ, ತಾಯಿ ಶ್ರೀಮತಿ ಗಂಗಾಂಬಿಕೆ ಅವರ ಸುಪುತ್ರರು. ಶಿಕ್ಷಣ ತುಮಕೂರಿನಲ್ಲಿ ಪಡೆದರು. ಎಂ.ಫಾರ್ಮ್ ಪದವೀಧರರಾದ ಶ್ರೀ ಕೀರ್ತಿಪ್ರಕಾಶ್ ಅವರು ಶ್ರೀ ಸಿದ್ಧಗಂಗಾ ಫಾರ್ಮಸಿ ಕಾಲೇಜಿನಲ್ಲಿ ಉಪನ್ಯಾಸಕರಾಗಿ ವೃತ್ತಿಜೀವನವನ್ನು ಪ್ರಾರಂಭಿಸಿ, ಪ್ರಸ್ತುತ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸುತ್ತಿದ್ದರು. ಶ್ರೀಯುತರು ಉತ್ತಮ ಪ್ರಾಧ್ಯಾಪಕರೆಂಬ ಹೆಗ್ಗಳಿಕೆಗೆ ಪಾತ್ರರಾಗಿದ್ದರು. ರಾಜ್ಯ ಹಾಗೂ ರಾಷ್ಟ್ರೀಯ ಮಟ್ಟದಲ್ಲಿ ನಡೆದ ವಿಚಾರ ಸಂಕಿರಣಗಳಲ್ಲಿ ಭಾಗವಹಿಸಿ ಮೌಲಿಕ ಪ್ರಬಂಧಗಳನ್ನು ಮಂಡಿಸಿ ಪ್ರಶಂಸೆಗೆ ಪಾತ್ರರಾಗಿದ್ದರು. ಪಿ.ಹೆಚ್‌ಡಿ. ವಿದ್ಯಾರ್ಥಿಗಳಿಗೆ ಮಾರ್ಗದರ್ಶಕರಾಗಿದ್ದರು. ಅವರ ಅಕಾಲಿಕ ನಿಧನ ಸಂಸ್ಥೆಗೆ ಹಾಗೂ ವಿದ್ಯಾರ್ಥಿಗಳಿಗೆ ತುಂಬಲಾರದ ನಷ್ಟ. ಅವರು ಕುಟುಂಬದವರು ಸೇರಿದಂತೆ ಅಪಾರವಾದ ಬಂಧು ಬಳಗ, ಸ್ನೇಹಿತರು, ವಿದ್ಯಾರ್ಥಿಗಳನ್ನು ಆಗಲಿದ್ದಾರೆ. ಮೃತರ ಆತ್ಮಕ್ಕೆ ಚಿರಶಾಂತಿಯನ್ನು ಹಾಗೂ ಅವರ ಕುಟುಂಬದವರಿಗೆ, ಬಂಧುಗಳಿಗೆ ಅವರ ಅಗಲಿಕೆಯ ನೋವನ್ನು ಸಹಿಸುವ ಶಕ್ತಿಯನ್ನು ಬಸವಾದಿ ಶರಣರು ಹಾಗೂ ಶ್ರೀ ಸಿದ್ಧಗಂಗಾ ಗುರುಪರಂಪರೆ ನೀಡಲಿ ಎಂದು ಸಿದ್ಧಗಂಗಾ ಪ್ರಾರ್ಥಿಸುತ್ತದೆ.




ಶ್ರೀ ಸಿದ್ಧಗಂಗಾ ಮಠದಲ್ಲಿ ಜುಲೈ ೬ ರಂದು, ತುಮಕೂರು ಜಿಲ್ಲಾ ಶರಣ ಸಾಹಿತ್ಯ ಪರಿಷತ್ ಅಧ್ಯಕ್ಷರಾದ ವಿದ್ವಾನ್ ಎಂ.ಜಿ. ಸಿದ್ಧರಾಮಯ್ಯ ಅವರು ಸಂಗ್ರಹಿಸಿರುವ 'ಸುಭಾಷಿತ ಸೌರಭ' ಕೃತಿಯನ್ನು ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ಲೋಕಾರ್ಪಣೆ ಮಾಡಿದರು. ಈ ಸಂದರ್ಭದಲ್ಲಿ ಪ್ರೊ. ಕೋ.ರಂ. ಬಸವರಾಜು, ಶ್ರೀಯುತರಾದ ಎಂ. ಬಾಲಚಂದ್ರ, ಹಂ.ಸಿ. ಕುಮಾರಸ್ವಾಮಿ, ಗಂಗಾಧರಯ್ಯ, ಮಿಮಿಕ್ರಿ ಈಶ್ವರಯ್ಯ ಹಾಗೂ ರಾಜಶೇಖರಯ್ಯ ಈಚನೂರು ಅವರು ಉಪಸ್ಥಿತರಿದ್ದರು.





ವರದಿ

# ಸಿದ್ಧಗಂಗಾ ತಾಂತ್ರಿಕ ಮಹಾವಿದ್ಯಾಲಯದಲ್ಲಿ ಬಸವ ಜಯಂತಿ



"ವಿದ್ಯಾರ್ಥಿಗಳು ಜೀವನದಲ್ಲಿ ಬಸವಣ್ಣನವರ ಆದರ್ಶಗಳನ್ನು; ಮಾನವೀಯ ಮೌಲ್ಯಗಳನ್ನು ಜೀವನದಲ್ಲಿ ಅಳವಡಿಸಿಕೊಂಡು ತಮ್ಮ ಬದುಕನ್ನು ಸಾರ್ಥಕಪಡಿಸಿಕೊಳ್ಳಬೇಕು. ಶರಣರು ಹೇಳಿದ ಕಾಯಕವೇ ಕೈಲಾಸ ಎಂಬ ಮಾತನ್ನು ಚಾಚೂತಪ್ಪದೇ ಪಾಲಿಸಬೇಕು. ಆಗ ಬದುಕಿನಲ್ಲಿ ಏನನ್ನಾದರೂ ಸಾಧಿಸಲು ಸಾಧ್ಯ. ಈ ನಿಟ್ಟಿನಲ್ಲಿ ನಾವೆಲ್ಲರೂ ಜೀವನ ರೂಪಿಸಿಕೊಳ್ಳೋಣ" ಎಂದು ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ಹೇಳಿದರು.

ಪೂಜ್ಯ ಶ್ರೀಗಳವರು ಸಿದ್ಧಗಂಗಾ ತಾಂತ್ರಿಕ ಮಹಾವಿದ್ಯಾಲಯದಲ್ಲಿ ಜುಲೈ ೧೦ ರಂದು ಏರ್ಪಡಿಸಿದ್ದ ಬಸವ ಜಯಂತಿ ಕಾರ್ಯಕ್ರಮವನ್ನು ಉದ್ಘಾಟಿಸಿ ಮಾತನಾಡಿದರು.

ಉಪನ್ಯಾಸ ನೀಡಿದ ಡಾ. ಬಿ. ನಂಜುಂಡಸ್ವಾಮಿಯವರು ಬಸವ ಜಯಂತಿ ಆಚರಣೆಗೆ ಬಂದ ರೀತಿ, ಬಸವಣ್ಣನವರ ಕಾಲದ ವಚನಗಳ ಸಂಶೋಧನೆ, ಸಂರಕ್ಷಣೆ ಬಗ್ಗೆ ತಿಳಿಸಿದರು.

ಸಮಾರಂಭದಲ್ಲಿ ಸಿದ್ಧಗಂಗಾ ತಾಂತ್ರಿಕ ಮಹಾವಿದ್ಯಾಲಯ ನಿರ್ದೇಶಕರಾದ ಡಾ. ಎಂ.ಎನ್. ಚನ್ನಬಸಪ್ಪ, ಮುಖ್ಯ ಕಾರ್ಯನಿರ್ವಹಣಾಧಿಕಾರಿ ಡಾ. ಶಿವಕುಮಾರಯ್ಯ, ಪ್ರಾಂಶುಪಾಲರಾದ ಡಾ. ಎಸ್.ವಿ. ದಿನೇಶ್, ಸಂಘದ ಪದಾಧಿಕಾರಿಗಳಾದ ಶ್ರೀ ಸಿ. ರೇಣುಕಯ್ಯ, ಶ್ರೀ ಎಂ.ಪಿ. ಉಮಾಶಂಕರ್ ಮೊದಲಾದವರು ಉಪಸ್ಥಿತರಿದ್ದರು.

ಇದೇ ಸಂದರ್ಭದಲ್ಲಿ ನಿವೃತ್ತ ನೌಕರರನ್ನು ಸನ್ಮಾನಿಸಲಾಯಿತು ಹಾಗೂ ವಿದ್ಯಾರ್ಥಿಗಳಿಗೆ ಪ್ರತಿಭಾ ಪುರಸ್ಕಾರ ನೀಡಿ ಗೌರವಿಸಲಾಯಿತು. ಸಮಾರಂಭದಲ್ಲಿ ಕಾಲೇಜಿನ ವಿದ್ಯಾರ್ಥಿನಿ ಕು. ಅನಘಪ್ರಸಾದ್ ಬಸವ ಪುರಾಣವನ್ನು ಹರಿಕಥೆ ಶೈಲಿಯಲ್ಲಿ ಸಾದರಪಡಿಸಿದರು. ಶ್ರೀಮಠದ ಕಲಾವಿದರಿಂದ ಜಗಜ್ಯೋತಿ ಬಸವೇಶ್ವರ ನಾಟಕ ಪ್ರದರ್ಶನ ನಡೆಯಿತು. ■





ವರದಿ

# ಶ್ರೀ ಕಂಚುಗಲ್ ಬಂಡೇಮಠದ ಲಿಂಗೈಕ್ಯ ಚರಮೂರ್ತಿ ಶ್ರೀ ಶ್ರೀ ಶಿವರುದ್ರ ಮಹಾಸ್ವಾಮೀಜಿಯವರ ಸಂಸ್ಮರಣೆ ಮತ್ತು ಚರಮೂರ್ತಿ ಶ್ರೀ ಶ್ರೀ ಬಸವಲಿಂಗ ಸ್ವಾಮೀಜಿಯವರ ಪಟ್ಟಾಧಿಕಾರದ ರಜತ ಮಹೋತ್ಸವ ಸಮಾರಂಭ

"ಬಂಡೇಮಠದ ಲಿಂಗೈಕ್ಯ ಚರಮೂರ್ತಿ ಶ್ರೀ ಶಿವರುದ್ರ ಮಹಾಸ್ವಾಮೀಜಿಯವರು ನನ್ನ ಬದುಕಿನಲ್ಲಿ ಬೆಳಕನ್ನು ನೀಡಿದವರು. ನನ್ನ ಇಂದಿನ ಸ್ಥಿತಿಗೆ ಕಾರಣಕರ್ತರು ಪರಮಪೂಜ್ಯ ಚರಮೂರ್ತಿಗಳಾಗಿದ್ದಾರೆ. ಅವರನ್ನು ಸ್ಮರಿಸುವ ಪುಣ್ಯದಾಯಕವಾದ ಕಾರ್ಯವನ್ನು ಇಂದು ಹಮ್ಮಿಕೊಳ್ಳಲಾಗಿದೆ" ಎಂದು ಶ್ರೀ ಸಿದ್ಧಗಂಗಾ ಮಠಾಧ್ಯಕ್ಷರಾದ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮೀಜಿಯವರು ನುಡಿನಮನದಲ್ಲಿ ತಿಳಿಸಿದರು.

ಮಾಗಡಿ ತಾಲ್ಲೂಕಿನ ಶ್ರೀ ಕಂಚುಗಲ್ ಬಂಡೇಮಠದಲ್ಲಿ ಜುಲೈ ೩ ರಂದು, ಹಮ್ಮಿಕೊಂಡಿದ್ದ ಲಿಂ. ಚರಮೂರ್ತಿ ಶ್ರೀ
ಶಿವರುದ್ರಸ್ವಾಮೀಜಿಯವರ ಸಂಸ್ಮರಣೆ ಮತ್ತು ಚರಮೂರ್ತಿ ಶ್ರೀ ಶ್ರೀ ಬಸವಲಿಂಗ ಸ್ವಾಮೀಜಿಯವರ ಪಟ್ಟಾಧಿಕಾರದ ರಜತ
ಮಹೋತ್ಸವ ಸಮಾರಂಭದ ದಿವ್ಯ ಸಾನ್ನಿಧ್ಯ ವಹಿಸಿ ಮಾತನಾಡಿದ ಶ್ರೀ ಸಿದ್ಧಲಿಂಗ ಮಹಾಸ್ವಾಮೀಜಿಯವರು "ಶ್ರೀ ಶಿವರುದ್ರ
ಸ್ವಾಮೀಜಿಯವರಿಗೆ ಎಲ್ಲವನ್ನೂ ಸಮರ್ಪಣೆ ಮಾಡುವ ಮನೋಭಾವ ಅವರದು. ತನು, ಮನ, ಧನವನ್ನು
ತ್ರಿಕರಣಪೂರ್ವಕವಾಗಿ ಅರ್ಪಿಸಿಕೊಂಡು ಪರಮಪೂಜ್ಯರಾಗಿದ್ದಾರೆ. "ತನುವ ಬೇಡಿದರೀವೆ, ಮನವ ಬೇಡಿದರೀವೆ, ಧನವ
ಬೇಡಿದರೀವೆ" ಎಂಬ ಬಸವಣ್ಣನವರ ವಾಣಿಯಂತೆ; ಶ್ರೀ ಸಿದ್ಧಗಂಗಾ ಮಠಕ್ಕೆ ಕೊಡುವ ಮನಸ್ಸುಳ್ಳವರು ಅವರಾಗಿದ್ದರು. ಶ್ರೀ
ಸಿದ್ಧಗಂಗಾ ಮಠದಲ್ಲಿ ನಡೆಯುತ್ತಿದ್ದ ಜಾತ್ರೆಯ ಸಂದರ್ಭದಲ್ಲಿ ಮೊದಲೇ ಬಂದು ಆಗಬೇಕಾದ ಕಾರ್ಯಗಳ ಕಡೆಗೆ
ಗಮನಹರಿಸಿ ಕರ್ತವ್ಯನಿರತರಾಗುತ್ತಿದ್ದರು. ಅವರು ಇರುವರೆಂದರೆ ಎಲ್ಲ ಕೆಲಸಗಳು ಸಾಂಗೋಪಾಂಗವಾಗಿ
ನೆರವೇರುತ್ತಿದ್ದವು. ಇದಕ್ಕೆಲ್ಲ ಕಾರಣ ಅವರಲ್ಲಿದ್ದ ಕರ್ತೃತ್ವ ಶಕ್ತಿಯೆಂದು" ಎಂದು ಅಭಿಪ್ರಾಯಪಟ್ಟರು.

"ತ್ಯಾಗ ಮತ್ತು ಸೇವೆಯ ಪ್ರತೀಕರಾಗಿದ್ದ ಶ್ರೀ ಶಿವರುದ್ರ ಸ್ವಾಮೀಜಿಯವರು ವಿನಯಸಂಪನ್ನರಾಗಿದ್ದರು. ಉದ್ದಾನ
ಶಿವಯೋಗಿಗಳವರ ಕೃಪೆಗೆ ಪಾತ್ರರಾಗಿದ್ದರು. ಸಂಸ್ಥಾನ ಮಠದ ಚರಮೂರ್ತಿಗಳಾಗಿದ್ದರೂ ಬಿಗುಮಾನಗಳಿಲ್ಲದೆ;
ಸರಳವಾಗಿ ಸಂತರಾಗಿ ಬದುಕಿದವರು. ಅವರದು ಮಾತೃಹೃದಯ. ನಾನು ಚಿಕ್ಕಂದಿನಿಂದಲೂ ಅವರ ಮಾತೃಹರಕೆಯಲ್ಲಿ




'ಶಿವಬಸವಶ್ರೀ' ಅಭಿನಂದನ ಗ್ರಂಥ ಲೋಕಾರ್ಪಣೆ







ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರಿಂದ ನುಡಿನಮನ

ಬೆಳೆದವನು. ನನ್ನ ಪೂರ್ವಾಶ್ರಮದ ತಾಯಿ ಹೇಗೋ; ಅಂತೆಯೇ ಶ್ರೀ ಶಿವರುದ್ರ ಸ್ವಾಮೀಜಿಯವರಾಗಿದ್ದರು. ಸರಳರಾದ ಪೂಜ್ಯರು ಭಕ್ತರ ಮನವನ್ನು ಕಟ್ಟುವ, ಮನೆಯನ್ನು ಬೆಳಗುವ ಕಾರ್ಯವನ್ನು ಮಾಡುತ್ತಿದ್ದರು. ಶ್ರೀಮಂತರು, ಬಡವರು ಎಂಬ ಭೇದವಿಲ್ಲದೆ ಎಲ್ಲರ ಮನೆಗಳಿಗೆ ದಯಮಾಡಿಸುತ್ತಿದ್ದರು. ಈ ಭಾಗದಲ್ಲಿ ಶಾಲೆ ಇಲ್ಲದ ಸಂದರ್ಭದಲ್ಲಿ ಶಾಲೆಯನ್ನು ಪ್ರಾರಂಭ ಮಾಡಿದರು. ಈ ಕಾರಣದಿಂದಾಗಿ ಈ ಭಾಗದ ಜನರು ವಿದ್ಯಾವಂತರಾಗಿ ಬಾಳನ್ನು ರೂಪಿಸಿಕೊಂಡಿದ್ದಾರೆ. ಅಂಥವರಲ್ಲಿ ಬೆಂಗಳೂರಿನ ಮಾಜಿ ಉಪಮಹಾಪೌರರಾದ ಶ್ರೀ ಬಿ.ಎಸ್.ಪುಟ್ಟರಾಜು ಅವರೂ ಕೂಡ ಒಬ್ಬರಾಗಿದ್ದಾರೆಂದು ಶ್ಲಾಘಿಸಿದರು. ಶ್ರೀ ಕಂಚುಗಲ್ ಬಂಡೇಮಠವು ಭಕ್ತರ ಮಠವಾಗಿದೆ. ಇದಕ್ಕೆ ಬೇರೆ ಯಾವುದೇ ಆದಾಯಗಳಿಲ್ಲ. ಆದರೆ ಭಕ್ತರೇ ಇದಕ್ಕೆ ಸಂಪತ್ತು. ಶ್ರೀ ಶಿವರುದ್ರ ಮಹಾಸ್ವಾಮೀಜಿಯವರ ಕರಕಮಲಸಂಜಾತರಾದ ಶ್ರೀ ಬಸವಲಿಂಗ ಸ್ವಾಮೀಜಿಯವರು ಶ್ರೀಮಠದ ಅಧ್ಯಕ್ಷರಾಗಿ ಸಾಕಷ್ಟು ಉತ್ತರೋತ್ತರ ಅಭಿವೃದ್ಧಿ ಕಾರ್ಯಗಳನ್ನು ಮಾಡುತ್ತಾ ಬರುತ್ತಿದ್ದಾರೆ. ಇವರಿಂದ ಶ್ರೀಮಠದ ಭಕ್ತರು ಮತ್ತು ಸಮಾಜ ಇನ್ನೂ ಹೆಚ್ಚಿನದನ್ನು ನಿರೀಕ್ಷೆ ಮಾಡಬಹುದಾಗಿದೆಯೆಂದು" ತಿಳಿಸಿದರು.

ಶ್ರೀ ಎಚ್.ಎಸ್.ಸಿದ್ಧಗಂಗಪ್ಪ ಮತ್ತು ಡಾ.ರುದ್ರೇಶ್ ಅದರಂಗಿ ಅವರು ಸಂಪಾದಿಸಿರುವ 'ಶಿವಬಸವಶ್ರೀ' ಅಭಿನಂದನಾ ಗ್ರಂಥವನ್ನು ಲೋಕಾರ್ಪಣೆ ಮಾಡಿದ ಸುತ್ತೂರಿನ ಜಗದ್ಗುರು ಪರಮಪೂಜ್ಯ ಶ್ರೀ ಶ್ರೀ ಶಿವರಾತ್ರಿ ದೇಶಿಕೇಂದ್ರ ಸ್ವಾಮೀಜಿಯವರು ತಮ್ಮ ಆಶೀರ್ವಚನದಲ್ಲಿ "ಕಂಚುಗಲ್ ಬಂಡೇಮಠದ ತೋಂಟದಾರ್ಯ ಸ್ವಾಮೀಜಿಯವರ ಕೊಡುಗೆ ಅನನ್ಯವಾದುದು. ಅವರ ನಂತರ ಬಂದ ಲಿಂ. ಶ್ರೀ ಶಿವರುದ್ರಸ್ವಾಮೀಜಿಯವರು ನಾಡಿನ ಹಲವು ಮಠಗಳೊಡನೆ ನಿಕಟವಾದ ಸಂಪರ್ಕವನ್ನಿಟ್ಟುಕೊಂಡಿದ್ದವರು. ಅವರದು ಮಾತೃವಾತ್ಸಲ್ಯದ ಹೃದಯಶ್ರೀಮಂತಿಕೆಯನ್ನು ಹೊಂದಿದ್ದರು. ದೇಗುಲ ಮಠದ ಶ್ರೀಗಳು, ಅಂಕನಹಳ್ಳಿ ಮಠದ ಶ್ರೀಗಳು, ಬೆಟ್ಟದಹಳ್ಳಿ ಶ್ರೀಗಳು ಸಮಕಾಲೀನರು. ಇವರುಗಳೆಲ್ಲರೂ ಪೂಜ್ಯ ಶ್ರೀ ಶಿವಕುಮಾರ ಸ್ವಾಮೀಜಿಯವರ ಅತ್ಯಂತ ನಿಕಟವರ್ತಿಗಳಾಗಿದ್ದವರು. ಶ್ರೀ ಶಿವರುದ್ರ ಸ್ವಾಮೀಜಿಯವರು ಅಂದಿನ ದಿನಮಾನಗಳಲ್ಲಿ ಗುಡೇಮಾರನಹಳ್ಳಿಯಿಂದ ಶಿವಗಂಗೆಯವರೆಗೆ ರಸ್ತೆಯ ಇಕ್ಕೆಲಗಳಲ್ಲಿ ಮರಗಳನ್ನು ನೆಟ್ಟು ಬೆಳೆಸಿದವರು. ಅವರೆಂದಿಗೂ ಪ್ರಚಾರವನ್ನು ಬಯಸಿದವರಲ್ಲ. ಅವರ ಸ್ಮರಣೆ ನಿಜಕ್ಕೂ ಪುಣ್ಯಕರವಾದುದು. ಇದೇ ಸಂದರ್ಭದಲ್ಲಿ ಶಿವಬಸವಶ್ರೀ ಗ್ರಂಥ ಲೋಕಾರ್ಪಣೆಗೊಳ್ಳುತ್ತಿರುವುದು ಸ್ತುತ್ಯಾರ್ಹವಾದುದೆಂದು" ಪ್ರಶಂಸಿಸಿದರು.

ಶ್ರೀ ಗಂ.ದಯಾನಂದ ಅವರು ನಿರ್ದೇಶನ ಮಾಡಿರುವ ಕಂಚುಗಲ್ ಬಂಡೇಮಠದ ಸಾಕ್ಷ್ಯಚಿತ್ರವನ್ನು ಲೋಕಾರ್ಪಣೆ ಮಾಡಿದ ಕರ್ನಾಟಕ ಪ್ರದೇಶ ಕಾಂಗ್ರೆಸ್ ಅಧ್ಯಕ್ಷರಾದ ಶ್ರೀ ಡಿ.ಕೆ.ಶಿವಕುಮಾರ್ ಅವರು ಮಾತನಾಡಿ



ಡಾ. ಶಾಮನೂರು ಶಿವಶಂಕರಪ್ಪ ಅವರಿಗೆ ಪೂಜ್ಯರಿಂದ ಆಶೀರ್ವಾದ



ಸಹಕಾರ ಸಚಿವರಾದ ಶ್ರೀ ಎಸ್.ಟಿ. ಸೋಮಶೇಖರ್ ಅವರಿಗೆ ಪೂಜ್ಯರಿಂದ ಆಶೀರ್ವಾದ



ಶ್ರೀ ಡಿ.ಕೆ. ಶಿವಕುಮಾರ ಅವರಿಗೆ ಪೂಜ್ಯರಿಂದ ಆಶೀರ್ವಾದ









ವಿವಿಧ ಕ್ಷೇತ್ರಗಳಲ್ಲಿ ಗಣನೀಯ ಸೇವೆ ಸಲ್ಲಿಸಿದ ಗಣ್ಯರಿಗೆ ಸನ್ಮಾನ

ನಾವು ಸಾಮಾನ್ಯವಾಗಿ ಮನೆ ಮಠ ಎನ್ನುತ್ತೇವೆ. ಎಂದರೆ ಎರಡು ಚೆನ್ನಾಗಿದ್ದಾಗ ಮಾತ್ರ ನಾವು ಚೆನ್ನಾಗಿರಲು ಸಾಧ್ಯ. ನಮಗೆ ನಮ್ಮ ಮನೆ ಎಷ್ಟು ಮುಖ್ಯವೋ; ಅಂತೆಯೇ ಸಮಾಜಕ್ಕೆ ಮಠ ಮುಖ್ಯ. ಹುಟ್ಟುವಾಗ ನಾವು ಅಳುತ್ತೇವೆ, ನಾವು ಸತ್ತಾಗ ಜನ ಅತ್ತರೇ ಅದು ಸಾಧನೆ. ಆ ಸಾಧನೆ ಮಾಡಲು ಮಠಗಳಿಗೆ ಸೇವೆ ಮಾಡಬೇಕು. ಈ ಬಂಡೇಮಠವು ಸಂಸ್ಕೃತಿಯಿಂದ ಕೂಡಿದೆಯೆಂದು" ತಮ್ಮ ನುಡಿನಮನವನ್ನು ಸಲ್ಲಿಸಿದರು. ಗೋಶಾಲೆ ಶಿಲಾನ್ಯಾಸವನ್ನು ನೆರವೇರಿಸಿದ ಕರ್ನಾಟಕ ಪ್ರದೇಶ ಕಾಂಗ್ರೆಸ್ ಪ್ರಚಾರ ಸಮಿತಿಯ ಅಧ್ಯಕ್ಷರಾದ ಶ್ರೀ ಎಂ.ಬಿ.ಪಾಟೀಲರು "ಲಿಂ.ಶ್ರೀ ಶಿವರುದ್ರ ಸ್ವಾಮೀಜಿಯವರು ೬೪ ಮಠಗಳನ್ನೊಳಗೊಂಡ ಸಂಸ್ಥಾನ ಮಠದ ಅಧ್ಯಕ್ಷರಾಗಿ ಜನರಲ್ಲಿ ಧಾರ್ಮಿಕ ಭಕ್ತಿಯನ್ನು ಜಾಗೃತಗೊಳಿಸಿದವರು. ಸಾಹಿತ್ಯಪ್ರಿಯರಾದ ಪೂಜ್ಯರು ಅಂದಿನ ಕಾಲದಲ್ಲಿ ಹರ್ಡೇಕರ್ ಮಂಜಪ್ಪ ಅವರಿಂದ ಆಲಮಟ್ಟಿಯಿಂದ ಪ್ರಕಟವಾಗುತ್ತಿದ್ದ ಪತ್ರಿಕೆಗಳು ಮತ್ತು ಪ್ರಕಟಣೆಗಳನ್ನು ತರಿಸಿ ಓದುತ್ತಿದ್ದರೆಂಬುದು ಸಾಮಾನ್ಯ ಸಂಗತಿಯಲ್ಲ. ಈ ಭಾಗದಲ್ಲಿ ಕಂಚುಗಲ್ ಬಂಡೇಮಠದ ಶೈಕ್ಷಣಿಕ ಕೊಡುಗೆ, ಧಾರ್ಮಿಕ ಕೊಡುಗೆ ಅಪಾರವಾದುದಾಗಿದೆ. ಅಪಾರವಾದ ಭಕ್ತರನ್ನೊಳಗೊಂಡಿರುವ ಶ್ರೀಮಠವು ನಾಡಿನ ಸಾಂಸ್ಕೃತಿಕ ಧಾರ್ಮಿಕ ಕ್ಷೇತ್ರವಾಗಿದೆ" ಎಂದು ಅಭಿಪ್ರಾಯಪಟ್ಟರು.

ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷರು ಮತ್ತು ಶಾಸಕರಾದ ಶ್ರೀ ಎಸ್.ಆರ್.ವಿಶ್ವನಾಥ್ ಅವರು ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮೀಜಿಯವರ ಭಾವಚಿತ್ರವನ್ನು ಅನಾವರಣ ಮಾಡಿ "ನಮ್ಮದು ಗುರು-ಮಠವನ್ನು ಗೌರವಿಸುವ ಸಂಸ್ಕೃತಿ. ಗುರುಗಳು ಮತ್ತು ಮಠಗಳು ಭಕ್ತರನ್ನು ಹರಸುತ್ತವೆ. ಈ ಮಾರ್ಗದಲ್ಲಿ ಲಿಂಗಾಯತ ಮಠಗಳ ಕೊಡುಗೆ ಅಪಾರವಾಗಿದ್ದು, ಶ್ರೀ ಕಂಚುಗಲ್ ಬಂಡೇಮಠವು ಭಕ್ತರ ಭಕ್ತಿ ಗೌರವದ ಪವಿತ್ರವಾದ ಸ್ಥಳವಾಗಿದೆಯೆಂದು" ಶ್ಲಾಘಿಸಿದರು. ಕರ್ನಾಟಕ ವೀರಶೈವ ಲಿಂಗಾಯತ ಅಭಿವೃದ್ಧಿ ನಿಗಮದ ಅಧ್ಯಕ್ಷರಾದ ಶ್ರೀ ಬಿ.ಎಸ್.ಪರಮಶಿವಯ್ಯನವರು ಶ್ರೀ ಶಿವರುದ್ರ ಸ್ವಾಮೀಜಿಯವರ ಭಾವಚಿತ್ರವನ್ನು ಅನಾವರಣ ಮಾಡಿ "ತನಗೆ ಹಾಗೂ ತಮ್ಮ ಕುಟುಂಬಕ್ಕೆ ಶ್ರೀ ಕಂಚುಗಲ್ ಬಂಡೇಮಠವು ಗುರುಪರಂಪರೆಯಾಗಿದೆ. ಶ್ರೀ ಶಿವರುದ್ರ ಸ್ವಾಮೀಜಿಯವರು ನಮ್ಮ ಮನೆಯ ಗುರುಗಳಾಗಿದ್ದರು. ಅವರಿಗೆ ಭಕ್ತರ ಮೇಲೆ ಹೆಚ್ಚಿನ ಪ್ರೀತಿ. ಒಂದು ರೀತಿಯಲ್ಲಿ ಯಾರೇ ಭಕ್ತರು ಮನಃಪೂರ್ವಕವಾಗಿ ನೆನೆಸಿಕೊಂಡಾಗ ಎಷ್ಟೋಬಾರಿ ಅವರ ಮನೆಗೆ ಹೋದ ಪ್ರತೀತಿಯಿದೆ. ಅವರ ನಂತರ ಈಗಿನ ಶ್ರೀ ಬಸವಲಿಂಗ ಸ್ವಾಮೀಜಿಯವರು ಮಠದ ಕೀರ್ತಿಯನ್ನು ವಿಸ್ತರಿಸಿದ್ದಾರೆ. ಭಕ್ತರೇ ಮಠದ ಆಸ್ತಿಯಾಗಿದ್ದು, ಅವರನ್ನು ಉದ್ಧರಿಸುವ ಕಾರ್ಯವನ್ನು ಮಾಡುತ್ತಿದ್ದಾರೆ. ಧಾರ್ಮಿಕ ಹಾಗೂ ಸಾಮಾಜಿಕವಾದ ಕಾರ್ಯಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆಂದು" ತಮ್ಮ ನುಡಿನಮನವನ್ನು ಸಲ್ಲಿಸಿದರು.

ಸಹಕಾರ ಸಚಿವರು ಹಾಗೂ ಮೈಸೂರು ಉಸ್ತುವಾರಿ ಸಚಿವರಾದ ಶ್ರೀ ಎಸ್.ಟಿ.ಸೋಮಶೇಖರ್ ಅವರು ಪ್ರಸಾದ ನಿಲಯಕ್ಕೆ ಶಂಕುಸ್ಥಾಪನೆಯನ್ನು ನೆರವೇರಿಸಿ 'ಕೋವಿಡ್ ಸಂದರ್ಭದಲ್ಲಿ ಲಕ್ಷಾಂತರ ಜನರಿಗೆ ಆಶ್ರಯ ನೀಡಿದವರು ಶ್ರೀ ಸುತ್ತೂರು ಹಾಗೂ ಶ್ರೀ ಸಿದ್ಧಗಂಗಾ ಮಠದ ಪೂಜ್ಯ ಶ್ರೀ ಶ್ರೀಗಳವರು ಹಾಗೂ ಇದೇ ರೀತಿಯಲ್ಲಿ ನಾಡಿನ ಮಠ ಮಂದಿರಗಳು ಜನರಿಗೆ ಸ್ಪಂದಿಸಿವೆ. ಇದೇ ರೀತಿಯಲ್ಲಿ ಕಂಚುಗಲ್ ಬಂಡೇಮಠವು ಈ ಭಾಗದಲ್ಲಿ ಶೈಕ್ಷಣಿಕವಾಗಿ, ಧಾರ್ಮಿಕವಾಗಿ,







ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷರಾದ
ಶ್ರೀ ಎಸ್.ಆರ್. ವಿಶ್ವನಾಥ್ ಅವರಿಗೆ ಪೂಜ್ಯರಿಂದ ಆಶೀರ್ವಾದ



ಬಿಬಿಎಂಪಿ ಮಾಜಿ ಮಹಾಪೌರರಾದ
ಶ್ರೀಮತಿ ಗಂಗಾಂಬಿಕೆ ಮಲ್ಲಿಕಾರ್ಜುನ ದಂಪತಿಗಳಿಗೆ
ಪೂಜ್ಯರಿಂದ ಆಶೀರ್ವಾದ

ಸಾಂಸ್ಕೃತಿಕವಾಗಿ ಭಕ್ತರಿಗೆ ಹರಸಿ ಹಾರೈಸುತ್ತಿದೆಯೆಂದು ತಮ್ಮ ನುಡಿನಮನವನ್ನು ಸಲ್ಲಿಸಿದರು. ಬೆಂಗಳೂರಿನ ಮಾಜಿ ಮಹಾಪೌರರಾದ ಶ್ರೀಮತಿ ಗಂಗಾಂಬಿಕೆ ಮಲ್ಲಿಕಾರ್ಜುನ್ ಅವರು "ಕರ್ನಾಟಕದ ಈ ಪ್ರಗತಿಗೆ ಬಸವಾದಿ ಶರಣ ಪರಂಪರೆಯ ಮಠಗಳ ಕೊಡುಗೆ ಅನನ್ಯವಾದುದಾಗಿದೆ. ಮಠಗಳಿಂದ ದಾಸೋಹ, ಶಿಕ್ಷಣ, ಧಾರ್ಮಿಕ ಸೇವಾ ಕೈಂಕರ್ಯಗಳು ನೆರವೇರುತ್ತಿವೆ. ಶ್ರೀ ಕಂಚುಗಲ್ ಬಂಡೇಮಠವು ತಮ್ಮ ಭಕ್ತರು ಮತ್ತು ವಿದ್ಯಾರ್ಥಿಗಳಿಗೆ ಸುಸಂಸ್ಕೃತಿಯನ್ನು ಕಲಿಸುತ್ತಿದೆಯೆಂದು" ತಿಳಿಸಿದರು. ಹಿರಿಯ ನಟರಾದ ಶ್ರೀ ದೊಡ್ಡಣ್ಣನವರು ಬಸವಾದಿ ಶರಣರ ವಚನಗಳನ್ನು ಉಲ್ಲೇಖಿಸಿ ಸನ್ನಡತೆ, ಸದಾಚಾರ, ಸಂಸ್ಕೃತಿಯನ್ನು ಮಠಗಳಲ್ಲಿ ಕಾಣಬಹುದೆಂದು ಮನಮುಟ್ಟುವಂತೆ ಮಾತನಾಡಿದರು.

ಅಖಿಲ ಭಾರತ ವೀರಶೈವ ಲಿಂಗಾಯತ ಮಹಾಸಭಾದ ಅಧ್ಯಕ್ಷರಾದ ಡಾ.ಶಾಮನೂರು ಶಿವಶಂಕರಪ್ಪ ಅವರು ಅತಿಥಿಗೃಹದ ಶಿಲಾನ್ಯಾಸವನ್ನು ನೆರವೇರಿಸಿದರು. ಬೇಲಿಮಠದ ಶ್ರೀ ಶಿವರುದ್ರ ಸ್ವಾಮೀಜಿಯವರು, ಗದ್ದುಗೆ ಮಠದ ಶ್ರೀ ಮಹಾಂತ ಸ್ವಾಮೀಜಿಯವರು ಆಶೀರ್ವಾದ ನೀಡಿದರು. ಇದೇ ಸಂದರ್ಭದಲ್ಲಿ ಚಾಮುಂಡೇಶ್ವರಿ ವಿದ್ಯುತ್ ನಿಗಮದ ವ್ಯವಸ್ಥಾಪಕ ನಿರ್ದೇಶಕರಾದ ಶ್ರೀ ಜಯವಿಭವಸ್ವಾಮಿ, ಕರ್ನಾಟಕ ಗ್ರಾಮೀಣ ಕುಡಿಯುವ ನೀರು ಸರಬರಾಜು ನಿಗಮದ ನಿರ್ದೇಶಕರಾದ ಶ್ರೀ ಗಂಗಾಧರಸ್ವಾಮಿ, ಕರ್ನಾಟಕ ಲೋಕಸೇವಾ ಆಯೋಗದ ಸದಸ್ಯರಾದ ಡಾ.ಹೆಚ್.ಎಸ್. ನರೇಂದ್ರ, ಗುತ್ತಿಗೆದಾರರಾದ ಶ್ರೀ ಆರ್. ಸಿದ್ಧಗಂಗಪ್ಪ, ಶ್ರೀ ಶಿವರುದ್ರಪ್ಪ, ಡಾ. ಸೋಮನಾಥ್ ಅವರನ್ನು ಸನ್ಮಾನಿಸಲಾಯಿತು.



ಶ್ರೀ ಬಸವಲಿಂಗ ಸ್ವಾಮೀಜಿಯವರ ಪಟ್ಟಾಧಿಕಾರದ ರಜತ ಮಹೋತ್ಸವದ ಸಂದರ್ಭದಲ್ಲಿ ೨೫ ಜನ ಸ್ವಾಮೀಜಿಯವರ ಪಾದ ಪೂಜೆಯನ್ನು ೨೫ ಜನ ಭಕ್ತರು ಅತ್ಯಂತ ಶ್ರದ್ಧಾ ಭಕ್ತಿಯಿಂದ ಪಾದ ಪೂಜೆಯನ್ನು ನೆರವೇರಿಸಿದರು.

ವರದಿ :
ಡಾ. ರುದ್ರೇಶ್ ಅದರಂಗಿ





ವರದಿ

# ಜಯನಗರದಲ್ಲಿ ಬಸವೇಶ್ವರ ಪುತ್ಥಳಿ ಲೋಕಾರ್ಪಣೆ



ಜುಲೈ ೧೦ ರಂದು, ಬೆಂಗಳೂರಿನ ಜಯನಗರದ ೮ನೇ ಹಂತದ ಶಾಕಾಂಬರಿನಗರ ವಾರ್ಡಿನ ಆರ್.ವಿ. ಜಂಕ್ಷನ್‌ನಲ್ಲಿ 'ಇಷ್ಟಲಿಂಗ ಪೂಜಿಸುವ ಬಸವೇಶ್ವರ ಪುತ್ಥಳಿ' ಲೋಕಾರ್ಪಣೆಯನ್ನು ಸುತ್ತೂರು ಜಗದ್ಗುರು ಪರಮಪೂಜ್ಯ ಶ್ರೀ ಶ್ರೀ ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳವರ ದಿವ್ಯಸಾನ್ನಿಧ್ಯದಲ್ಲಿ ಸಿದ್ಧಗಂಗಾ ಕ್ಷೇತ್ರಾಧ್ಯಕ್ಷರಾದ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ಲೋಕಾರ್ಪಣೆ ಮಾಡಿದರು.

ಪೂಜ್ಯ ಶ್ರೀಗಳವರು ಈ ಸಂದರ್ಭದಲ್ಲಿ ಆಶೀರ್ವಚನ ನೀಡುತ್ತಾ "ಬಸವೇಶ್ವರರ ತತ್ತ್ವಗಳಾದ ಸ್ವಾತಂತ್ರ್ಯ, ಸಮಾನತೆ, ಭ್ರಾತೃತ್ವ, ಕಾಯಕ, ಶಿವಯೋಗಾನುಷ್ಠಾನ, ಅನ್ನದಾಸೋಹ ಮಾರ್ಗಗಳನ್ನು ಪಾಲಿಸಿದಲ್ಲಿ ಉತ್ತಮ ಬದುಕು ಕಟ್ಟಿಕೊಳ್ಳಬಹುದು. ಆಧುನಿಕ ಸಮಾಜದ ಎಲ್ಲ ಸಮಸ್ಯೆಗಳ ಪರಿಹಾರಕ್ಕೆ ಬಸವಣ್ಣನವರು ತಿಳಿಸಿದ ತತ್ತ್ವಪಾಲನೆ ಅಗತ್ಯವಾಗಿದೆ. ವ್ಯಕ್ತಿಯು ಅಂತರಂಗ ಮತ್ತು ಬಹಿರಂಗ ಜೀವನ ಉತ್ತಮಗೊಳಿಸಿಕೊಳ್ಳಲು ವಚನಗಳ ಅಧ್ಯಯನ ಮಾಡಿ, ಅವುಗಳಲ್ಲಿರುವ ಸಂದೇಶವನ್ನು ಅರ್ಥಮಾಡಿಕೊಂಡು ಜೀವನದಲ್ಲಿ ಅಳವಡಿಸಿಕೊಳ್ಳಬೇಕು. ಗಂಗಾಂಬಿಕೆ ಮಲ್ಲಿಕಾರ್ಜುನರವರು ಮೇಯರ್ ಆಗಿದ್ದಾಗ ಸಮಾಜಮುಖಿ ಕೆಲಸ ಮಾಡಿದ್ದರು" ಎಂದು ಮೆಚ್ಚುಗೆ ವ್ಯಕ್ತಪಡಿಸಿದರು,

ಸಾನ್ನಿಧ್ಯ ವಹಿಸಿದ್ದ ಸುತ್ತೂರು ಜಗದ್ಗುರು ಪರಮಪೂಜ್ಯ ಶ್ರೀ ಶ್ರೀ ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳವರು ಮಾತನಾಡಿ "ನಗರದ ಬಸವೇಶ್ವರ ವೃತ್ತದಲ್ಲಿ ನಿರ್ಮಿಸಿರುವ ಅಶ್ವಾರೂಢ ಬಸವೇಶ್ವರ ಪುತ್ಥಳಿ ಬದಲು ಇಷ್ಟಲಿಂಗ ಪೂಜಿಸುವ ಪುತ್ಥಳಿ ನಿರ್ಮಿಸಬೇಕಿತ್ತು ಎಂದು ಅಂದಿನ ಮುಖ್ಯಮಂತ್ರಿಗಳಾಗಿದ್ದ ಎಸ್. ನಿಜಲಿಂಗಪ್ಪನವರು ಇಂಗಿತ ವ್ಯಕ್ತಪಡಿಸಿದ್ದರು. ಈಗ ಆರ್.ವಿ. ಜಂಕ್ಷನ್‌ನಲ್ಲಿ ಇಷ್ಟಲಿಂಗ ಪೂಜಿಸುವ ಪುತ್ಥಳಿ ಲೋಕಾರ್ಪಣೆಯಾಗುತ್ತಿರುವುದು ಶ್ಲಾಘನೀಯ. ಇಷ್ಟಲಿಂಗವು ಆತ್ಮದ ಸಂಕೇತವಾಗಿದ್ದು, ಅಂತರಂಗದಲ್ಲಿರುವ ಭಗವಂತನನ್ನು ಕಾಣುವುದಕ್ಕೆ ದಾರಿ ಮಾಡಿಕೊಡಲಿದೆ. ಸಾಂಸಾರಿಕ ಜಂಜಾಟ, ವ್ಯಾಪಾರ ಮತ್ತು ಇತರೆ ಕಾರ್ಯಗಳಿಂದ ಏಕಾಗ್ರತೆ ಸಾಧಿಸಲು ಇಷ್ಟಲಿಂಗಪೂಜೆ ಅನುವು ಮಾಡಿಕೊಡುತ್ತದೆ. ಭಗವಂತನನ್ನು ನೆನೆಯುವ ಕಾರ್ಯ ಇಷ್ಟಲಿಂಗ ಪೂಜೆಯಿಂದ ನೆರವೇರಿದಂತೆ" ಎಂದು ಹೇಳಿದರು.

ಸಮಾರಂಭದಲ್ಲಿ ಉಪಸ್ಥಿತರಿದ್ದ ಕೆಪಿಸಿಸಿ ಪ್ರಚಾರ ಸಮಿತಿ ಅಧ್ಯಕ್ಷ ಶ್ರೀ ಎಂ.ಬಿ. ಪಾಟೀಲ್ ಅವರು






ಮಾತನಾಡಿ "ಇಡೀ ದೇಶವೇ ಸಂಸ್ಕೃತಮಯವಾಗಿದ್ದು ೧೨ನೇ ಶತಮಾನದ ಕಾಲಘಟ್ಟದಲ್ಲಿ ಬಸವಾದಿ ಶರಣರು ಕನ್ನಡದಲ್ಲಿ ವಚನಗಳನ್ನು ರಚಿಸುವ ಮೂಲಕ ದೇವರಿಗೇ ಕನ್ನಡ ಕಲಿಸಿಕೊಟ್ಟಿದ್ದಾರೆ. ಕಲ್ಯಾಣದಲ್ಲಿ ಕ್ರಾಂತಿಯಾಗದೆ ಜನರು ಬಸವಣ್ಣನವರ ಆದರ್ಶಗಳನ್ನು ಅನುಕರಣೆ ಮಾಡಿದ್ದರೆ ಬಸವಧರ್ಮ ಜಾಗತಿಕ ಧರ್ಮವಾಗುತ್ತಿತ್ತು. ಈಗಲೂ ನಾವೆಲ್ಲರೂ ಬಸವಣ್ಣನವರ ತತ್ತ್ವಗಳನ್ನು ಜೀವನದಲ್ಲಿ ಅಳವಡಿಸಿಕೊಂಡರೆ ಬಸವಧರ್ಮವನ್ನು ಜಾಗತಿಕವಾಗಿ ಬೆಳೆಸಲು ಸಾಧ್ಯವಾಗುತ್ತದೆ" ಎಂದು ಹೇಳಿದರು.

ಮಾಜಿ ಮೇಯರ್ ಶ್ರೀಮತಿ ಗಂಗಾಂಬಿಕೆ ಮಲ್ಲಿಕಾರ್ಜುನ ಅವರು ಮಾತನಾಡಿ "ಬಸವಣ್ಣನವರ ಸಾಹಿತ್ಯದ ಪರಿಚಯುವನ್ನು ಯುವ ಪೀಳಿಗೆಗೆ ಮಾಡಿಕೊಟ್ಟಲ್ಲಿ ಮಾತ್ರ ಸರ್ವರಿಗೂ ಸಮಭಾವ ಸಮಾಜ ನಿರ್ಮಾಣ ಸಾಧ್ಯ" ಎಂದು ಹೇಳಿದರು.

ಸಮಾರಂಭದಲ್ಲಿ ಕೆಪಿಸಿಸಿ ಅಧ್ಯಕ್ಷರಾದ ಶ್ರೀ ಡಿ.ಕೆ. ಶಿವಕುಮಾರ್, ಕಾರ್ಯಾಧ್ಯಕ್ಷ ಶ್ರೀ ರಾಮಲಿಂಗಾರೆಡ್ಡಿ, ಶಾಸಕಿ ಸೌಮ್ಯರೆಡ್ಡಿ, ಮಾಜಿ ಉಪಮೇಯರ್ ಶ್ರೀ ಬಿ.ಎಸ್. ಪುಟ್ಟರಾಜು, ಶ್ರೀ ಚೇತನ ಕೇಶವಮೂರ್ತಿ ಮೊದಲಾದವರು ಉಪಸ್ಥಿತರಿದ್ದರು. ■




ಸಿದ್ಧಗಂಗಾ ಸನಿವಾಸ ಪ್ರೌಢಶಾಲೆಯ ೨೦೦೫–೨೦೦೬ನೇ ಸಾಲಿನ ೧೦ನೇ ತರಗತಿ 'ಬಿ' ವಿಭಾಗದ ಹಳೆ ವಿದ್ಯಾರ್ಥಿಗಳು ಶ್ರೀಮಠದಲ್ಲಿ ಒಟ್ಟಾಗಿ ಸೇರಿ ದಿನಾಂಕ ೧೩-೭-೨೦೨೨ ರಂದು ಗುರುವಂದನ ಕಾರ್ಯಕ್ರಮವನ್ನು ಗುರುಪೂರ್ಣಿಮೆಯ ಶುಭದಿವಸದಂದು ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರ ದಿವ್ಯಾ ಪಾದಪೂಜೆ ನೆರವೇರಿಸಿ ಪರಮಪೂಜ್ಯರಿಂದ ಆಶೀರ್ವಾದ ಪಡೆದರು.

"Siddaganga" Monthly - Postal Reg. No. L2/RNP/385/TMR/2021-23
Posted at RMS, Tumkur-572 102

RNI No. 17139/69













To

If undelivered please return to :
Editor
Siddaganga Monthly Magazine
Siddaganga Math
Tumkur-572 104

Cover printed at : Geetanjali Graphics, B-71, KSSIDC Indl. Area, 9th Block, Rajajinagar, Bengaluru-10. Ph : 23404232

email ID : geetanjaligraphics@gmail.com